# ವಡಗಾವದ ವಿಜಯದ ಬಗ್ಗೆ ಅಭಿಪ್ರಾಯಗಳು.

ವಡಗಾವದ ವಿಜಯ (ಲೇಖಕ ಭಿ. ಪ. ಕಾಳೆ ವ್ಯವಸ್ಥಾಪಕ, ಶ್ರೀ. ಶೇಷಾಚಲ ಗ್ರಂಥಮಾಲಾ, ಆನಂದವನ ಅಗಡಿ ಪುಟಸಂಖ್ಯೆ ಡೆಮಿ ೧೬೮+೪ ಬೆಲೆ ೧ ರೂ. ೪ ಆಣೆ.)

ಇದೊಂದು ಐತಿಹಾಸಿಕ ಕಾದಂಬರಿ. ಮರಾಟಿಗರಿಗೂ ಇಂಗ್ಲಿಷರಿಗೂ ಆದ ಮೊದಲನೆಯ ಯುದ್ಧದ—ವಡಗಾವದ ಸಂಗ್ರಾಮದ—ಇತಿಹಾಸವು ಇದರಲ್ಲಿ ಅಡಕವಾಗಿದೆ. ಲೇಖಕರು ತಾವು ಈ ಕಾದಂಬರಿಯನ್ನು ಮರಾಟಿಯಲ್ಲಿರುವ 'ಪೇಶ್ವ್ಯಾಂಚಿ ಬಖರ' ಹಾಗು 'ಇಂಗ್ರಜಾಂಚಾ ಪರಾಭವ' ಎಂಬ ಪುಸ್ತಕಗಳ ಆಧಾರದಿಂದ ಬರೆದಿರುವೆವೆಂದು ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಪುಸ್ತಕವು ಸವಾಯಿ ಮಾಧವರಾಯನ ದರ್ಬಾರದ ಚಿತ್ರದಿಂದ ಅಲಂಕೃತವಾಗಿದೆ.

ಪೇಶ್ವೆ ನಾರಾಯಣರಾಯನ ಕೊಲೆಯಾಯಿತು. ಈ ಹತ್ಯಾಕಾಂಡದ ಅಪರಾಧಿಗಳಾರು? ಈ ಅಪರಾಧದ ಹೊರೆಯನ್ನು ಯಾರ ಮೇಲೆ ಎಷ್ಟರ ಮಟ್ಟಿಗೆ ಹೊರಿಸಬಹುದು? ಎಂಬ ವಿಷಯದಲ್ಲಿ ಐತಿಹಾಸಿಕರಲ್ಲಿ ಮತಭೇದವಿದೆ. ಈ ವರೆಗಿನ ಇತಿಹಾಸಕಾರರಲ್ಲಿಯ ಬಹು ಜನರು ಈ ಕೊಲೆಯನ್ನು ನಾರಾಯಣರಾಯನ ಕಕ್ಕನೂ, ಮೊದಲನೇ ಬಾಜೀರಾಯನ ಮಗನೂ ಆಗಿದ್ದ ರಘುನಾಥರಾಯನ ಹೆಂಡತಿಯಾದ ಆನಂದೀಬಾಯಿಯು ಮಾಡಿಸಿದಳೆಂದೂ, ಇದಕ್ಕೆ ರಘುನಾಥರಾಯನ ವಿರೋಧವಾಗಲಿಲ್ಲವೆಂದೂ ಉಲ್ಲೇಖಿಸಿದ್ದಾರೆ; ಈ ಇತಿಹಾಸಕಾರರ ಮತದಂತೆ ಆನಂದೀಬಾಯಿ ಹಾಗು ರಘುನಾಥರಾಯರು ನಾರಾಯಣರಾಯನ ಕೊಲೆಯ ಅಪ್ರತ್ಯಕ್ಷ ಅಪರಾಧಿಗಳಾಗಿದ್ದಾರೆ.

ನಾರಾಯಣರಾಯನ ಕೊಲೆಯ ತರುವಾಯ ಪೇಶ್ವೆಯ ಸಿಂಹಾಸನಕ್ಕೆ ರಘುನಾಥರಾಯನು ಏಕಮಾತ್ರ ವಾರಸದಾರನಾಗಿದ್ದನು ಆನಂದೀಬಾಯಿಯು ರಾಜ್ಯಲೋಭದ ಆಸುರೀಯ ಮಹತ್ವಾಕಾಂಕ್ಷಿಯಾಗಿ ಈ ಕೊಲೆಯ ಮಾಡಿಸಿದ್ದಳು. ಈ ಕಠೋರ ಹೃದಯದ ನಾರಿಯು—ಅಲ್ಲ ಮಾರಿಯು—ತನ್ನ ಕಡೆಗಣ್ಣಿನ ನೋಟದ ಬಲವಿನಂತೆ ಕುಣಿಯುತ್ತಿದ್ದ ಪತಿಯು ಪೇಶ್ವೆಪದಾರೂಢನಾಗಬೇಕು, ರಾಜ್ಯ ಸೂತ್ರಗಳು ತನ್ನ ಕೈಸೇರಬೇಕು, ಎಂದು ಆಲೋಚಿಸಿದವಳಾಗಿದ್ದಳು; ಹಾಗು ನೀಚಕಾರ್ಯ ಪ್ರವೃತ್ತಳಾಗಿ ನಿರ್ದಯತೆಯಿಂದ ನಾರಾಯಣರಾಯನ ನಿರ್ಯಾಣವನ್ನು ನೆರವೇರಿಸಿದ್ದಳು. ನಾರಾಯಣರಾಯನ ಈ ಅಕಾಲಿಕ ಅಪಮೃತ್ಯುವಿನಿಂದ ರಘುನಾಥರಾಯನ ಸಿಂಹಾಸನಾರೋಹಣಕ್ಕೆ ಯಾರ ಪ್ರತಿಬಂಧವೂ ಉಂಟಾಗಬಾರದಾಗಿತ್ತು. ಪೇಶ್ವೆರಾಜವಂಶದಲ್ಲಿ ಏಕಮಾತ್ರ ಪುರುಷನಾಗಿದ್ದ ರಘುನಾಥರಾಯನು ನಿರ್ವಿಘ್ನತೆಯಿಂದ ಪಟ್ಟವೇರಿ,

# ಸದ್ಗುಣಿ--ಕಮಲಾ

ಅಥವಾ

## ಸ್ವಜನ-ದ್ರೋಹ.


ಲೇಖಕ:—

ವೀರಬಸಪ್ಪ ರುದ್ರಪ್ಪ ಜಡಿ,

ಅಸಿ. ಮಾಸ್ತರ. ಕ. ಶಾಲಾ, ಹುಬ್ಬಳ್ಳಿ.



ಪ್ರಕಾಶಕ:—

ಭಿ ಪ. ಕಾಳೆ, ಮ್ಯಾನೇಜರ,

ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ.

( ದ್ವಿತೀಯ ಮುದ್ರಣ )





೧೯೩೯ನೇ ಡಿಶೆಂಬರ






ಬೆಲೆ ೧೮ಆ.

## ಲೇಖಕನ ಎರಡು ಮಾತುಗಳು

ಕನ್ನಡ ನುಡಿಯಲ್ಲಿ ಕಲ್ಪಿತ ಸಾಮಾಜಿಕ ಕಾದಂಬರಿ ಕಡಿ
ಮತ್ತು ಅವನ್ನು ಬರೆಯುವದಾದರೂ ಕಠಿಣವೆಂದು ಕೆಲವರೆಳುವ
ಆದರೆ ತನ್ನ ಮೇಲಾಗಲಿ, ತನ್ನ ಮಿತ್ರರ ಮೇಲಾಗಲಿ ಬಂದ ವಿಚ
ಸಂಗತಿಗಳನ್ನು ಒಂದೇ ವ್ಯಕ್ತಿಗೆ ಹೊಂದಿಸಿ ಬರೆದರೆ ಅದೇ ಸಾಮಾ
ಕಾದಂಬರಿಯಾಗುವದು. ಅದರಂತೆ ೧೯೨೧ನೇ ಇಸ್ವಿಯಲ್ಲಿನ್ನ ಬಂ
ಗಳಿಂದ ನನ್ನ ಮೇಲೆ ಬಂದ ಒಂದು ಸುಳ್ಳು ಖಟ್ಲೆಯ ರೀತಿಯ
ಸ್ವಲ್ಪ ಹೆಚ್ಚು ಕಡಿಮೆ ಮಾಡಿ, ಈ ಕಾದಂಬರಿಯನ್ನು ರಚಿಸಿರು
ರಲ್ಲಿಯ 'ಸ್ವಜನರ ಸ್ವತ್ತನ್ನೆತ್ತಿಹಾಕುವ ಪಾಪಿಯು ತಪ್ಪ ಪ್ರಾ
ಶ್ಚಿತ್ತವನ್ನು ಭೋಗಿಸುವನು' ಎಂಬ ನೀತಿಯನ್ನರಿತು, ಬಂ
ವರ್ಗವು ಸನ್ಮಾರ್ಗದಿಂದ ನಡೆದರೆ, ನನ್ನ ಶ್ರಮದ ಸಾರ್ಥಕವೆಂತಾ
ವದು.

ಶ್ರೀಯುತ ಹ. ನ. ಕೊಲ್ಹಾಪುರ, ಮಾಸ್ತರ ಆನೇ ನಂ. ಶಾ
ಹುಬ್ಬಳ್ಳಿ ಇವರು ಈ ಕಾದಂಬರಿಯ ಹಸ್ತಲಿಖಿತ ಪ್ರತಿಯನ್ನು ತಿ
ಸಯುಕ್ತಿಕ ಸೂಚನೆಗಳನ್ನು ಸೂಚಿಸಿದ್ದಕ್ಕಾಗಿ ನಾನವರಿಗೆ ಚಿರಋಣಿ
ಗಿರುವೆನು; ಮತ್ತು ಶ್ರೀ. ಶೇಷಾಚಲ ಗ್ರಂಥಮಾಲೆಯ ಮಾಲಕರು ತ
ಮಾಲೆಗೆ ಈ ಕಾದಂಬರಿಯನ್ನು ಆದರದಿಂದ ಸ್ವೀಕರಿಸಿದ ಉಪಕಾರವ
ದರೂ ಸ್ಮರಿಸದಿರಲಾರೆನು.

ಜೂನ ೧೯೨೩

ಹುಬ್ಬಳ್ಳಿ. ವೀ. ರು. ಜಡಿ, ಮಾಸ್ತರ



ಆನಂದವನ-ಅಗಡಿಯ "ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸ"ನಲ್ಲಿ
ಭಿ. ಪ. ಕಾಳೆ, ಇವರಿಂದ ಮುದ್ರಿಸಲ್ಪಟ್ಟಿತು.

# ಪ್ರಸ್ತಾವನೆ.



ಈ ನೂತನ ಸಾಮಾಜಿಕ ಕಾದಂಬರಿಯನ್ನು ಮಿ. ವೀರಬಸಪ್ಪ ರುದ್ರಪ್ಪ ಜಡಿ, ಇವರು ಬರೆದು ಕನ್ನಡ ವಾಚಕವೃಂದದ ಮೇಲೆ ಬಹು ದೊಡ್ಡ ಉಪಕಾರವನ್ನು ಮಾಡಿರುವರು. ಯಾಕಂದರೆ, ಪ್ರಸ್ತುತದ ಕಾಲದಲ್ಲಿ ಇಂಥ ಕಾದಂಬರಿಗಳ ಅವಶ್ಯಕತೆಯು ಬಹಳಿರುವದು. ಬಂಧುಗಳಿರಲಿ, ಬೆನ್ನಲಿ ಬಿದ್ದ ಅಣ್ಣ-ತಮ್ಮಂದಿರಿರಲಿ ಯಾರಿದ್ದರೂ ವಂಚಿಸಿ ತನ್ನ ಮನೆಯೊಂದನ್ನು ತುಂಬಿಕೊಳ್ಳಬೇಕೆಂಬ ನೀಚ ಸ್ವಾರ್ಥವು ಹೆಚ್ಚಿದ ಕಾಲದಲ್ಲಿ ಈ ಅಪಸ್ವಾರ್ಥಿಗಳ ಗತಿಯು ಕೊನೆಗೆ ಯಾವ ಮನೆಗೆ ಬರುತ್ತದೆಂಬದನ್ನು ತೋರಿಸುವ ಸಮಿಾಚೀನ ಕಾದಂಬರಿಗಳು ಆಗಾಗ್ಗೆ ಹೊಸ ಹೊಸ ಕಲ್ಪನೆಗಳಿಂದ ಉದಯಕ್ಕೆ ಬರುತ್ತಿರುವದು ವಿಹಿತವಾಗಿರುವದು. ವ್ಯಕ್ತಿಯಲ್ಲಿರುವ ಕೌಟುಂಬಿಕ ಹಾಗು ಸಾಮಾಜಿಕ ದುರ್ಗುಣಗಳು ನಾಮಶೇಷವಾಗಬೇಕಾದರೆ ಯಾವ ಕಥಾ-ಕಾದಂಬರಿಗಳ ವಾಚನವು ಅವಶ್ಯಕವಾದದ್ದೋ, ಅಂಥ ಕಥಾ-ಕಾದಂಬರಿಗಳಲ್ಲಿ ಪ್ರಸ್ತುತದ ಕಾದಂಬರಿಯೂ ಒಂದಾಗಿರುವದೆಂದು ಹೇಳಲಾಗುವದು.

ಪ್ರಸ್ತುತಕಾದಂಬರಿಯಲ್ಲಿ ಒಂದು ಕೌಟುಂಬಿಕ ಸುಸಂಗತ ಕಥೆಯು ಅಡಕವಾಗಿದ್ದು, ವಿನಾಯಕನೆಂಬ ದುಷ್ಟನು ತನ್ನ ದೌರ್ಜನ್ಯದ ಪ್ರಭಾವವನ್ನು ಸಾತ್ವಿಕರಾದ ಅಣ್ಣ-ತಮ್ಮಂದಿರ ಮೇಲೂ, ಹಡೆದ ತಾಯಿಯ ಮೇಲೂ, ಅತ್ತಿಗೆಯ ಮೇಲೂ ಚನ್ನಾಗಿ ತೋರಿಸಿರುವನು. ಆತನ ಈ ದೌರ್ಜನ್ಯದ ಆಘಾತಕ್ಕೆ ಸಿಕ್ಕ ತಾಯಿ-ತಮ್ಮಂದಿರು ಸತ್ವಗೆಡದ್ದೇನೊ ಆಶ್ಚರ್ಯವಲ್ಲ; ಆದರೆ ಶ್ರೀಮಂತರ ಮನೆತನದವಳಾದ ಕಮಲಾಬಾಯಿಯು ಗಂಡನು ತಿರುಗಿ ಬರುವನೆಂಬ ಆಶೆಯಿಲ್ಲದಿದ್ದರೂ ಪತಿವಿಯೋಗ ದುಃಖವನ್ನು ಸಹಿಸಿಕೊಂಡದ್ದಲ್ಲದೆ,ಪರಮನೀಚನಾದ ಮೈದುನನ(ವಿನಾಯಕನ) ಬಗೆಬಗೆಯ ನಿಂದ್ಯ ಕೃತ್ಯಗಳಿಗೆ ಒಳಗಾಗಿ ಅನೇಕ ವಿಧವಾಗಿ ಕಷ್ಟಪಟ್ಟರೂ ಅತ್ತೆಯಮನೆಯ ವಿಷಯವಾಗಿ ಅನಾದರ ತಾಳಲಿಲ್ಲ. ಇಷ್ಟೇ ಅಲ್ಲ, ಇಂಥ ಪರಮವಿಪತ್ತಿನಲ್ಲಿಯೂ ತನ್ನ ಪ್ರಖರತರವಾದ ಪಾತಿವ್ರತ್ಯವನ್ನು ಕಾಯ್ದುಕೊಂಡು ಲೋಕಾದರಣೀಯಳಾದಳು. ಕಮಲಾಬಾಯಿಯಂಥ ಸದ್ಗುಣಿಗಳು ಯಾವ ಕುಟುಂಬದಲ್ಲಿರುವರೋ ಆ ಕುಟುಂಬವು ಧನ್ಯವಾ

ದದ್ದೆಂದು ಹೇಳಬಹುದು. ಈ ಇಡೀ ಕಾದಂಬರಿಗೆ ಆ ತರುಣೀಮಣಿಯು ಆಧಾರಸ್ತಂಭವಾಗಿರುವಳು. ಆದ್ದರಿಂದ ಪ್ರಸ್ತುತದ ಕಾದಂಬರಿಗೆ ಸದ್ಗುಣಿ ಕಮಲಾ ಎಂಬ ಹೆಸರನ್ನಿಟ್ಟಿದೆ. ಕೊನೆಗೆ ಈ ಸಾತ್ವಿಕಳ ತಪಃ ಪ್ರಭಾವದಿಂದ ಆಕೆಯ ಗಂಡನು ತಿರುಗಿ ಬರಲು, ಕಾದಂಬರಿಯಲ್ಲಿಯ ದುಃಖಿತ ವ್ಯಕ್ತಿಗಳಿಗೆ ಹ್ಯಾಗೆ ಆನಂದವಾಯಿತೆಂಬ ಪ್ರಸಂಗವನ್ನು ವಿವರಿಸಿರುವದರಿಂದ ಕಾದಂಬರಿಗೆ ಒಂದು ಬಗೆಯ ಮನೋರಮತೆಯು ಪ್ರಾಪ್ತವಾಗಿರುತ್ತದೆ. ಇರಲಿ

ವಿ. ಜಡಿ, ಇವರು ಈ ಕಾದಂಬರಿಯ ಸಂಪೂರ್ಣ ಬಾಧ್ಯತೆಯನ್ನು ನಿಸ್ವಾರ್ಥ ಬುದ್ಧಿಯಿಂದ ಶ್ರೀ ಶೇಷಾಚಲ ಗ್ರಂಥಮಾಲೆಗೆ ಸಮರ್ಪಿಸಿರುವದರಿಂದ ನಾವು ಅವರ ಉಪಕಾರವನ್ನು ಸ್ಮರಿಸುವೆವು. ಅವರು ಬರೆದು ಕಳುಹಿದ ಹಕ್ಕ ಸಮರ್ಪಣೆಯ ಪತ್ರವನ್ನು ವಾಚಕರ ಅವಗಾಹನೆಗಾಗಿ ಈ ಕಾದಂಬರಿಯ ಕವ್ಹರಿನಲ್ಲಿ ಕೊಟ್ಟಿದೆ. ನಮ್ಮ ಕನ್ನಡಿಗರಲ್ಲಿ ಇಂಥ ಉದಾರ ತರುಣರೂ, ಉತ್ತಮ ಕಾದಂಬರಿಕಾರರೂ ಹೆಚ್ಚಲೆಂದು ಶ್ರೀ ಶೇಷಾಚಲ ಸದ್ಗುರುವನ್ನು ಪ್ರಾರ್ಥಿಸಿ, ಈ ಪ್ರಸ್ತಾವನೆಯನ್ನು ಮುಗಿಸುವೆವು

ಆನಂದವನ,
೧೮-೬-೧೯೨೩

ಸಜ್ಜನ ವಿಧೇಯ,
ಆರ್. ಟಿ. ಕರ್ಪೂರ.

---

೨ನೇ ಆವೃತ್ತಿ:—ಮೊದಲನೇ ಆವೃತ್ತಿಯ ಪ್ರತಿಗಳು ತೀರಿದ್ದರಿಂದ ತಿದ್ದಿದ ಈ ೨ನೇ ಆವೃತ್ತಿಯನ್ನು ಹೊರಡಿಸಿದೆ.

ಪ್ರಕಾಶಕ.

೨೭-೧೧-೨೯

---

# ಸದ್ಗುಣಿ-ಕಮಲಾ.



## ಮೊದಲನೆಯ ಪರಿಚ್ಛೇದ.



ಸಂಧ್ಯಾಕಾಲವು; ದಿನಕರನು ಆಕಾಶಮಾರ್ಗವನ್ನು ಕ್ರಮಿಸಿ ಬೇಸತ್ತು ವಿಶ್ರಾಂತಿಗಾಗಿ ಅಪರಾದ್ರಿಯನ್ನು ಸೇರತೊಡಗಿದ್ದಾನೆ. ಎಲ್ಲಿಡೆಯಲ್ಲಿಯೂ ಹೊಂಬಣ್ಣದ ಹೂಬಿಸಿಲು ಪಸರಿಸಿದೆ ಈ ವೇಳೆಗೆ ಸರಿಯಾಗಿ ಧಾರವಾಡ ಶಹರದ ಲೈನಬಾಜಾರವು ಜನದಟ್ಟಣೆಯಿಂದ ಶೋಭಾಯಮಾನವಾಗಿತ್ತು. ಹೊತ್ತು ಮುಳುಗಿತೆಂದು ತಮ್ಮ ತಮ್ಮ ಗೂಡುಗಳನ್ನು ಸೇರುವದಕ್ಕಾಗಿ ಹಾರಾಡುವ ಪಕ್ಷಿಗಣದ ಮಂಜುಲ ಕಿಲಿಬಿಲಿ ಧ್ವನಿಯು ಜನರ ಗದ್ದಲದಲ್ಲಿ ಅಡಗಿ ಹೋಗಿತ್ತು. ಅಂಗಡಿಕಾರರು ಗಿರಾಕಿಗಳಿಗೆ ಜೀನಸು ಕೊಡುವದರಲ್ಲಿ ಮಗ್ನರಾಗಿ ಹೋಗಿದ್ದರು. ತಿರುಗಾಡಲಿಕ್ಕೆ ಹೋದ ಶ್ರೀಮಂತರ ರಥಗಳೂ, ಟಾಂಗೆಗಳೂ ಒಂದರಹಿಂದೊಂದು ಭರದಿಂದ ಬರಹತ್ತಿದ್ದವು. ಹಗಲೆಲ್ಲ ದುಡಿದು ದಣಿದ ಕೂಲಿಕಾರರು ದಣುವಾರಿಸಿಕೊಳ್ಳುವದಕ್ಕಾಗಿ ಮನೆಯ ಮುಂದೆ ಕುಳಿತು ಸಮಯೋಚಿತ ಮಾತುಗಳನ್ನಾಡುತ್ತಿದ್ದರು. ಆವರು ಅಳುವ ತಮ್ಮ ಮಕ್ಕಳಿಗೆ ಟಾಂಗೆಯ ಕುದುರೆಗಳನ್ನು ತೋರಿಸಿ, ಸಮಾಧಾನಪಡಿಸುತಲಿದ್ದರು.

ಇಂಥ ಸಮಯದಲ್ಲಿ ಅದೇ ಓಣಿಯೊಳಗಿನದೊಂದು ಮನೆಯೊಳಗೆ ಒಬ್ಬ ತರುಣನು ಮಿಣುಗುಟ್ಟುವ ದೀಪದ ಮಂದಪ್ರಕಾಶದಲ್ಲಿ ಒಂದು ಪತ್ರವನ್ನು ಓದುತ್ತ ಕುಳಿತಿದ್ದನು. ಇಪ್ಪತ್ತು ವರ್ಷ ವಯಸ್ಸುಳ್ಳ ಆ ತರುಣನು ಗೌರವರ್ಣದವನೂ, ಒಳ್ಳೇ ಬೆಳೆಗೆಯವನೂ, ಅತಿ ಸುಂದರನೂ ಇದ್ದನಲ್ಲದೆ ವಿದ್ಯಾವಂತನೂ ಇದ್ದನು. ಈಗ ಅವನು ಬರಿಯ ಮೈಯಿಂದ ಕುಳಿತುಕೊಂಡದ್ದರಿಂದ ಮನೋಹರವಾದ ಬಿಗುವಿನಮೈಕಟ್ಟು

ಹಿಡಿದು ಕಾಣುತ್ತಿತ್ತು. ಆತನ ಬಲಗಡೆಗೆ ಹಬ್ಬ ತರುಣಿಯು ಕುಳಿತಿದ್ದು ಹಿನ್ನೆ ಪತ್ರದ ಕಡೆಗೂ ಮತ್ತೊಮ್ಮೆ ಕ್ಷಣಕ್ಷಣಕ್ಕೆ ಬದಲಾಗುವ ಆ ತರುಣನ ಮುಖಮುದ್ರೆಯ ಕಡೆಗೂ ಲಕ್ಷ್ಯಗೊಟ್ಟು ನೋಡುತಲಿದ್ದಳು. ಬಡತನದ ಉಡಿಗೆ ತೊಡಿಗೆಗಳಿಂದಲಂಕೃತಳಾಗಿದ್ದರೂ ಆ ತರುಣಿಯು ಸೌಂದರ್ಯದಲ್ಲಿ ಕೊರತೆಯುಂಟಾಗಿದ್ದಿಲ್ಲ. ಆಕೆಯ ಸುಪ್ರಸನ್ನವಾದ ಮುಖಮುದ್ರೆ, ತಿಳುವಾದ ಹವಣಿಯ ಮೈಕಟ್ಟು, ಮನೋಹರವಾದ ಗೌರವರ್ಣ, ಉಕ್ಕಿ ಹೊರಸೂಸುವ ಚಲ್ವಿಕೆ ಇವು ಎಂಥವರ ಚಿತ್ತವನ್ನಾದರೂ ಚಂಚಲಗೊಳಿಸುತ್ತಿದ್ದವು. ಆ ತರುಣಿಯ ವಯಸ್ಸು ಇಪ್ಪತ್ತೊಂದರಕ್ಕೆ ಮೀರಿರಲಿಲ್ಲ.

ಪತ್ರ ಓದುವದಾದಬಳಿಕ ಆ ತರುಣನು—"ಇದೆಂಥ ಆಶ್ಚರ್ಯಕರ ಸಂಗತಿ! ನಾನು ರೂಪಾಯಿ ಕಳಿಸಿಲ್ಲವೆಂದು ಮಾವಂದಿರು ಸ್ಪಷ್ಟವಾಗಿ ಬರೆದಿರುವರು; ಅಂದಮೇಲೆ ಆ ಸಾವಿರ ರೂಪಾಯಿಗಳನ್ನು ಮನಿಆರ್ಡರ ಮಾಡಿ ಕಳಿಸಿದವರಾರು? ಮಾವಂದಿರ ಹೊರತಾಗಿ ನಮಗೆ ರೂಪಾಯಿ ಕಳಿಸುವವರು ಯಾರೂ ಇಲ್ಲ." ಎಂದು ನುಡಿದು, ಸಮೀಪದಲ್ಲಿದ್ದ ತರುಣಿಯ ಕಡೆಗೆ ನೋಡುತ್ತ ವಿಚಾರಕ್ಕೊಳಗಾದನು.

ಈ ಉದ್ಗಾರವನ್ನು ಕೇಳಿ ಅಡಿಗೆಯ ಮನೆಯಲ್ಲಿದ್ದ ಸೀತಾಬಾಯಿ ಎಂಬೋರ್ವ ವೃದ್ಧಳು ಹೊರಗೆ ಬಂದು, ಯೋಚಿಸುತ್ತ ಕುಳಿತಿದ್ದ ತರುಣನನ್ನು ಕುರಿತು:—"ತಮ್ಮಾ, ರಂಗರಾಯರು ರೂಪಾಯಿ ಕಳಿಸಿಲ್ಲವೆಂದು ಬರೆದಿರುವರೇನು? ಚನ್ನಾಗಿ ಓದಿನೋಡಿದೆಯೋ-ಇಲ್ಲೋ?" ಎಂದು ಕೇಳಿದಳು.

ತರುಣನು:—"ಅವ್ವಾ, ಚನ್ನಾಗಿಯೆಂದರೆ, ಹ್ಯಾಗೆ ಓದಿ ನೋಡಬೇಕು? ಅದರಲ್ಲಿ ಬರೆದಷ್ಟು ಓದಿಕೊಂಡೆನು. ಕಮಲಕ್ಕಾ, ನನ್ನ ಮಾತು ಅವ್ವನಿಗೆ ನಿಜವೆನಿದು ಕಾಣಲೊಲ್ಲದು. ನೀನಾದರೂ ಇದನ್ನು ಇನ್ನೊಮ್ಮೆ ಓದಿಹೇಳು, ಅಂದರೆ ಸಮಾಧಾನವಾದೀತು." ಎಂದು ಹೇಳಿ ಆ ತರುಣಿಯ ಮುಂದೆ ಪತ್ರವನ್ನು ಚಲ್ಲಿಕೊಡಲು, ಕಮಲಾಬಾಯಿಯು ತನ್ನ ಮನಸ್ಸಿನಲ್ಲೊಮ್ಮೆ ಆ ಪತ್ರವನ್ನೋದಿಕೊಂಡು ಸೀತಾಬಾಯಿಯನ್ನುದ್ದೇಶಿಸಿ:-'ಅತ್ತೆಯವರೇ, ಈ ಪತ್ರವು ಮರಾಠೀ ಭಾಷೆಯಲ್ಲಿ ಬರೆಯಲ್ಪಟ್ಟಿದೆ. "ಓದಿದರೆ ಇದರ ಅರ್ಥವು ನಿಮಗೆ ತಿಳಿಯಲಾರದು. ಮುರಲೀಧರರು ಅಂದಂತೆ ಅಪ್ಪನು ರೂಪಾಯಿ ಕಳಿಸಿಲ್ಲವೆಂಬದು ನಿಜವು." ಎಂದು ಮೃದು

ಸ್ವರದಿಂದ ನುಡಿದು, ಆ ಪತ್ರವನ್ನು ಕಪಾಟನಲ್ಲಿಡುವದಕ್ಕಾಗಿ ಎದ್ದು ಹೋದಳು. ಇದನ್ನು ಕೇಳಿ, ಸೀತಾಬಾಯಿಯು ಆಶ್ಚರ್ಯಯುಕ್ತಮುದ್ರೆಯಿಂದ:—"ಮುರಲೀ, ರಂಗರಾಯರು ತಾವು ರೂಪಾಯಿ ಕಳಿಸಿಲ್ಲವೆಂದು ಬರೆದ ಮೇಲೆ ಮತ್ತೆ ಯಾರು ಕಳಿಸಿಕೊಡಬೇಕು? ಯಾರಾದರೂ ನಿಮ್ಮ ಅಣ್ಣನಿಗೆಂದು ಕಳಿಸಿದ ರೂಪಾಯಿಗಳು ತಪ್ಪಿ ನಮ್ಮಲ್ಲಿಗೆ ಬಂದಿರ ಬಹುದೇನು?"

ಮುರಲೀಧರ:—"ಛೀ, ಛೀ, ಹಾಗೆ ತಪ್ಪಿ ಬರಲಿಕ್ಕೆ ಸಂಭವವಿಲ್ಲ. ಒಬ್ಬರ ಹೆಸರಿನಿಂದ ಬಂದ ರೂಪಾಯಿಗಳನ್ನು ಮತ್ತೊಬ್ಬರು ತಕ್ಕೊಳ್ಳಲಿಕ್ಕೂ ಬರುವದಿಲ್ಲ; ಮತ್ತು ಅಂಚೆಯವರಿಗೆ ಹಾಗೆಕೆ ಕೊಡಲಿಕ್ಕೂ ಬರುವದಿಲ್ಲ; ಆದರೆ ಇದರಲ್ಲಿ ಏನೋ ಚಮತ್ಕಾರವಿದ್ದಂತೆ ತೋರುತ್ತದೆ. ಈ ರೂಪಾಯಿಗಳನ್ನು ಹಾಗೆಯೇ ಮನೆಯಲ್ಲಿಟ್ಟುಕೊಂಡು ಕುಳಿತರೆ, ಮುಂದೆ ಅಪವಾದಕ್ಕೆ ಗುರಿಯಾಗಬೇಕಾದೀತು; ಇಷ್ಟಾಗಿ, ಮನೆಯಲ್ಲಿ ದುಡ್ಡಿದ್ದರೆ ಉಳಿಯುವದೆಲ್ಲಿ? ಈಗ ಎಂಟು ದಿವಸಗಳೊಳಗಾಗಿ ಇಪ್ಪತ್ತೈದು ರೂಪಾಯಿಗಳು ಖರ್ಚಾಗಿ ಹೋದವು. ಹೀಗೆಯೇ ನಾವು ಖರ್ಚು ಮಾಡುತ್ತ ಹೋದರೆ ಮುಂದೆ ಗತಿಯೇನು? ಕಾರಣ ಖರ್ಚಾದ ರೂಪಾಯಿಗಳನ್ನು ಜಮಾ ಮಾಡಿ. ಬೆಳಗ್ಗೆ ಯಾವದಾದರೊಂದು ವರ್ತಮಾನ ಪತ್ರದಲ್ಲಿ ಈ ಸಂಗತಿಯನ್ನು ಪ್ರಸಿದ್ಧಗೊಳಿಸಿದರಾಯಿತು; ಅಂದರೆ, ಇದ್ದದ್ದು ತಾನೇ ಹೊರಬೀಳುವದು." ಎಂದು ನುಡಿಯುವಷ್ಟರಲ್ಲಿ ಮುರಲೀಧರನ ಅಣ್ಣ ವಿನಾಯಕರಾಯರೆಂಬವರು ಒಳಗೆ ಬಂದರು.

ಅಣ್ಣನನ್ನು ನೋಡಿ ಮುರಲೀಧರನು ಎದ್ದು ನಿಂತು ವಿನಯದಿಂದ:- ಅಣ್ಣಾ, ಮೇಲೆ ಬಾ. ಈ ಕಂಬಳಿಯ ಮೇಲೆ ಕೂಡ್ರು. ಬಡವರ ಮನೆಗೆ ಬಹಳ ದಿವಸಕ್ಕೆ ಬರೋಣವಾಯಿತು?" ಎಂದು ನುಡಿದನು.

ತಮ್ಮನು ನಿರ್ಮಲ ಮನಸ್ಸಿನಿಂದ ಸತ್ಕರಿಸುತ್ತಿರಲು, ವಿನಾಯಕರಾಯನು ಸಿಟ್ಟಿನಿಂದ:— ಠಕ್ಕಾ, ಹೀಗೆ ಮೇಲೆ-ಮೇಲೆ ಉಪಚಾರದ ಮಾತುಗಳನ್ನಾಡಿ, ಎಷ್ಟು ಮಂದಿಯ ಗೋಣು ಮುರಿದಿರುವೆ? ಎಂದು ಥಟ್ಟನೆ ಉತ್ತರ ಕೊಟ್ಟನು.

ಮುರಲೀಧರನು ಗಾಬರಿಯಾದನು. ಆದರೂ ಆ ನಿಷ್ಠುರ ಮಾತು ಮನಸ್ಸಿಗೆ ಹಚ್ಚಿಕೊಳ್ಳದೆ ಶಾಂತಸ್ವರದಿಂದ:—"ಅಣ್ಣಾ, ನಾನು ಯಾರ

ಗೋಣನ್ನು ಮುರಿದಿರುವೆನು? ತಾವಾಗಿಯೇ ಮನೆಗೆ ಬಂದವರಿಗೆ ಶಿಷ್ಟಾಚಾರದಂತೆ ಮರ್ಯಾದೆ ಮಾಡುವದು ಅವರ ಗೋಣು ಮುರಿಯು ವದಕ್ಕಾಗಿಯೇ ಏನು?''

ವಿ:—''ಕಳ್ಳಾ, ನೀನಾರ ಗೋಣು ಮುರಿದಿರುವೆಯೆಂಬದನ್ನೂ, ಯಾಕೆ ಇಂಥ ಉಪಚಾರದ ಮಾತುಗಳನ್ನಾಡುವಿಯೆಂಬುದನ್ನೂ ಈಗಲೇ ತೋರಿಸುವೆನು, ತಾಳು.'' ಎಂದು ಆವೇಶದಿಂದ ನುಡಿಯುತ್ತ, ಅಡಿಗೆಯ ಮನೆಯ ಬಾಗಿಲಲ್ಲಿ ನಿಂತುಕೊಂಡಿದ್ದ ಸೀತಾಬಾಯಿಯ ಕಡಗೆ ಕೈತೋರಿಸಿ, ಮತ್ತೆ:—'' ಈ ಮುದಿಗೂಗೆಯ ಮಾತನ್ನು ಕೇಳಿ, ನನ್ನ ಮನೆಯನ್ನೆಲ್ಲ ಹಾಳುಮಾಡಿಬಿಟ್ಟೆ. ಸ್ವತಃ ನನ್ನ ದುಡ್ಡನ್ನಪಹರಿಸಿದ ನೀಚರು ನೀವು ಮುಂದಿಯ ದುಡ್ಡನ್ನು ಬಿಟ್ಟೀರಾ? ಪರರ ಸ್ವತ್ತನ್ನಪಹರಿಸುವದು ನಿಮಗೆ ಮೋಜು ಆಗಿದೆಯಲ್ಲವೆ? ಆಗಲಿ. ನಿಮ್ಮೆಲ್ಲರ ಕೈಯಲ್ಲಿ ಸಾಲ ಬೇಡಿಗಳನ್ನು ಹಾಕಿಸಿ, ಈ ಧಾರವಾಡದ ತುಂಬೆಲ್ಲ ಮೆರೆಯಿಸಿ ಬಿಡುತ್ತೇನೆ. ಅಂದರೆ ನನ್ನ ಕೈ ನಿಮಗೆ ಗೊತ್ತಾಗುವದು.'' ಎಂದು ಮತ್ತಿಷ್ಟು ಕರ್ಕಶ ಸ್ವರ ದಿಂದ ನುಡಿದರು.

ಈ ಮಾತುಗಳನ್ನು ಕೇಳಿ, ಸೀತಾಬಾಯಿಯು ಕಳವಳಗೊಂಡು:— ''ತಮ್ಮಾ ವಿನಾಯಕಾ, ಹೀಗೇಕೆ ಬಿರುಸುಮಾತುಗಳನ್ನಾಡುವಿಯೋ? ನಾವು ಮಾಡಿದ ತಪ್ಪಾದರೂ ಯಾವದು? ಸಮಾಧಾನದಿಂದ ಹೇಳು. ನಿನ್ನ ಈ ಮಾತುಗಳನ್ನು ಕೇಳಿದ ನೆರೆಹೊರೆಯವರು ಏನಂದಾರು? ಹೀಗೆ ತಮ್ಮ ನಿಗೆ ನಿಷ್ಕಾರಣವಾಗಿ ನಿಷ್ಠುರ ಮಾತುಗಳನ್ನಾಡಬಾರದಪ್ಪಾ. ಮೊದಲು ಕುಳಿತುಕೋ; ಆಮೇಲೆ ಮುರಲಿಯ ಕಡೆಯಿಂದ ಏನಾದರೂ ತಪ್ಪಾಗಿದ್ದರೆ, ಬುದ್ಧೀ ಹೇಳಿ, ಚನ್ನಾಗಿ ಅವನ ಕಿವಿ ಹಿಂಡು.'' ಎಂದು ಹಿರಿಯತನದ ಧರ್ಮಕ್ಕನುಸರಿಸಿ ಮಮತೆಯಿಂದ ಹೇಳಿದಳು.

ತಾಯಿಯು ಇಷ್ಟು ಮಮತೆಯಿಂದ ಮಾತಾಡಿದರೂ ವಿನಾಯಕ ರಾಯರ ಕೋಪಾನಲವು ಶಾಂತವಾಗಲಿಲ್ಲ. ಅವನು ತಮ್ಮನಿಂದಾದ ತಪ್ಪನ್ನು ಹೇಳದೆ, ಮತ್ತಿಷ್ಟು ಕೋಪಗೊಂಡವರಂತೆ:—''ಈ ಹೊಲಿ ಯನು ತಮ್ಮನೇ? ತಂದೆಯು ಸತ್ತಾಗಲೇ ನನ್ನ ಪಾಲಿಗೆ ಎಲ್ಲ ಅಣ್ಣ- ತಮ್ಮಂದಿರೂ, ತಾಯಿಯೂ ಸತ್ತುಹೋಗಿದ್ದಾರೆ! ನೀವೆಲ್ಲರೂ ನನ್ನನ್ನು ಹಾಳುಮಾಡುವ ವೈರಿಗಳು'' ಎಂದು ಇನ್ನೂ ಏನೇನೋ ಅಸಂಬದ್ಧ ನುಡಿ

ಗಳನ್ನು ಅನ್ನುತ್ತಿರಲು, ಈ ವರೆಗೆ ಶಾಂತನಿದ್ದ ಮುರಲೀಧರನು ತಮ್ಮ ಯಾವ ತಪ್ಪನ್ನೂ ತೋರಿಸಿಕೊಡದೆ ಬಾಯಿಗೆ ಬಂದಂತೆ ಒದರಾಡಿದ್ದಕ್ಕಾಗಿ ಸಂತಾಪಗೊಂಡು,ವಿನಾಯಕನನ್ನು ಕುರಿತು ಗಂಭೀರ ಸ್ವರದಿಂದ:-"ಅಣ್ಣಾ, ಆಡಬಾರದ ಮಾತುಗಳನ್ನಾಡಿ ಯಾಕೆ ಬಾಯಿ ಹೊಲಸು ಮಾಡಿಕೊಳ್ಳುತ್ತೀ? ಇದ್ದದ್ದನ್ನು ಸ್ಪಷ್ಟವಾಗಿ ಹೇಳಿಬಿಡು. ಹೀಗೆ ಮನಬಂದಂತೆ ಮಾತಾಡಿದರೆ ಸಿಟ್ಟು ತಡೆಯಲಿಕ್ಕಿಲ್ಲ. ನಮಗೆ ಪರರ ಸ್ವತ್ತನ್ನು ಅಪಹರಿಸಿ ಶ್ರೀಮಂತ ರಾಗಬೇಕೆಂಬ ಕಾಂಕ್ಷೆಯು ಇದ್ದರೆ ಕೋರ್ಟಿನಲ್ಲಿ ದಾವೇ ಮಾಡಿ, ಪಾಲು ತಕ್ಕೊಳ್ಳದೆ ಪಿತ್ರಾರ್ಜಿತ ಅಪಾರಸಂಪತ್ತನ್ನು ಕಾಲಿನಿಂದೊದ್ದು ಬಡವರ ಹಾಗೆ ಈ ಬಾಡಿಗೆಯ ಮನೆಯಲ್ಲಿ ವಾಸಿಸುತ್ತಿದ್ದಿಲ್ಲ; ಮತ್ತು ಸಹೋದರ ರನ್ನು ವಂಚಿಸಿ, ಅಪಾರಸಂಪತ್ತಿನಿಂದ ಉಪ್ಪರಿಗೆಯಲ್ಲಿ ಮೆರೆಯುವ ನಿನಗೇ ಆ ಕಬ್ಬಿಣದ ಖಡೆಗಳು ಶೋಭಿಸುವವಲ್ಲದೆ, ನಮ್ಮಂತಹ ಬಡವರಿಗೆ ಅವು ಹ್ಯಾಗೆ ಶೋಭಿಸಬೇಕು? ನಾನು ಧನಿಕನು, ನನ್ನನ್ನು ಎಲ್ಲರೂ ಮನ್ನಿಸುತ್ತಾರೆ, ನನ್ನ ಶ್ರೀಮಂತಿಕೆಯ ಖ್ಯಾತಿಯು ಕೋರ್ಟ-ಕಚೇರಿಗಳಲ್ಲಿಯೂ ಕೂಡ ಇದೆ, ಎಂದು ನೀನು ಗರ್ವಿಷ್ಠನಾಗಿರಬಹುದು. ಇದೇ ಗರ್ವದಿಂದಲೇ ನೀನು ನಿನ್ನ ಸುಖೋಪಭೋಗಕ್ಕೆ ಕಂಟಕರಂತಿದ್ದ ಈ ಬಡತಾಯಿ-ತಮ್ಮಂ ದಿರನ್ನೂ, ಸಾಧು ಸ್ವಭಾವದ ಹಿರಿಯಣ್ಣನನ್ನೂ ಓಡಿಸಿಬಿಟ್ಟಂತೆ, ಯಾವ ದಾದರೊಂದು ಇಕ್ಕಟ್ಟಿನ ಪೇಚಿನಲ್ಲಿ ದೂಡಿ ಅವರನ್ನು ಮುರಿದು ಮೂಲಿ ಗೊತ್ತಬೇಕೆಂದು ಮಾಡಿರಬಹುದು; ಆದರೆ ಅಣ್ಣಾ! ಪರರ ಪಾಲಿನ ಐಶ್ವರ್ಯವು ಎಷ್ಟು ದಿವಸ ದಕ್ಕೀತು? ಪೂಜ್ಯಳಾದ ತಾಯಿಯನ್ನೂ, ಬಂಧುಗಳನ್ನೂ ವಂಚಿಸಿ ಭೋಗಿಸುವ ಈ ಸುಖವು, ಮೂಢನು ಕಲ್ಪನಾ ಸೃಷ್ಟಿಯಲ್ಲಿ ಸುಳ್ಳು ಸುಖವನ್ನು ಭೋಗಿಸುವಂತೆಯೇ ಸರಿ." ಎಂದು ಸ್ಪಷ್ಟವಾಗಿ ನುಡಿದನು.

ದುರಭಿಮಾನದ ವಿನಾಯಕರಾಯರಿಗೆ ಇಂಥ ಅಮರ್ಯಾದೆಯ ಮಾತುಗಳಿಂದ ಅಂಗಾಲೊಳಗಿನ ಬೆಂಕಿಯು ಮಸ್ತಕಕ್ಕೆ ಏರಿತು. ಕೂಡಲೆ ಅವರು:—"ಕಳ್ಳಾ, ಸುಳ್ಳು ಮಾತುಗಳಿಂದ ನನ್ನನ್ನು ನಿಂದಿಸುತ್ತೀಯಾ? ನನ್ನವೇ ಸಾವಿರ ರೂಪಾಯಿಗಳನ್ನು ಎತ್ತಿಹಾಕಿ ಮೇಲೆ ನನಗೆ ಇಂಥ ಕೆಟ್ಟ ಮಾತುಗಳೇ? ನಿನ್ನ ನಾಲಿಗೆಯನ್ನು ಕಿತ್ತಿಸುವೆನು ತಡೆ, ನನ್ನ ಯೋಗ್ಯತೆಯು ನಿಮಗಿನ್ನೂ ತಿಳಿದಿಲ್ಲವೆಂಬಂತೆ ತೋರುತ್ತದೆ. ಅನುಭವವಿಲ್ಲದೆ ತಿಳಿಯುವ

ದಾದರೂ ಹ್ಯಾಗೆ?'' ಎಂದು ಗರ್ಜಿಸಿ, ತನ್ನ ಸಂಗಡ ಮೊದಲೇ ಹೊರಗೆ ಬಂದು ಕುಳಿತುಕೊಂಡಿದ್ದ ಇಬ್ಬರು ಪೋಲಿಸರಲ್ಲಿ ಒಬ್ಬನನ್ನುದ್ದೇಶಿಸಿ:—"ಹವಾಲದಾರ ಸಾಹೇಬರೇ, ಮೊದಲು ಬೇಡಿಗಳನ್ನು ತೆಗೆದುಕೊಂಡು ಬರ್ರಿ. ಈ ಠಕ್ಕನಿಗೆ ಚೆನ್ನಾಗಿ ಹೊಡೆದು ಬೇಡಿಯನ್ನು ಹಾಕಿ, ಮನೆಯನ್ನೆಲ್ಲ ಜಪ್ತ ಮಾಡಿ, ಸಾವಿರ ರೂಪಾಯಿಗಳನ್ನು ಹುಡುಕಿ ತೆಗೆಯಿರಿ. ನಡುವೆ ಯಾರಾದರೂ ನಿಮಗೆ ಅಡ್ಡಿ ಮಾಡಿದರೆ, ಅವರಿಗೂ ನಾಲ್ಕು ತಳಿಸಿರಿ, ಹಿಂದು ಮುಂದೆ ನೋಡಬೇಡಿರಿ, ಬಂದದ್ದಕ್ಕೆ ನಾನಿದ್ದೇನೆ ಈ ಕಳ್ಳರಿಗೆ ಕೈ ಕಾದು ಪ್ರಯೋಜನವಿಲ್ಲ'' ಎಂದು ಹೇಳುವಷ್ಟರಲ್ಲಿಯೇ ಹವಾಲದಾರ ಸಾಹೇಬರು ಬೇಡಿಯನ್ನು ಹಿಡಿದುಕೊಂಡು ಒಳಗೆ ಬಂದು ನಿಂತರು. ಕರೇ ಅಂಗಿಯ ಹವಾಲದಾರರನ್ನು ನೋಡಿದ ಕೂಡಲೇ ಮಾನಧನನಾದ ಮುರಲೀಧರನ ದಿಟ್ಟತನವೆಲ್ಲ ಬಯಲಾಗಿ, ಅಂಜಿಕೆಯಿಂದ ಮೈ ನಡುಗಹತ್ತಿತು; ಅಲ್ಲದೆ, ಅಶ್ರುಗಳು ತಮ್ಮಷ್ಟಕ್ಕೆ ತಾವೇ ಉದುರಹತ್ತಿದವು. ಆಗ ಅವನು ಕಂಪಿತಸ್ವರದಿಂದ ವಿನಾಯಕನನ್ನು ಕುರಿತು:—"ಅಣ್ಣಾ, ನಿನಗೆ ನಿಂದಿಸಿದ್ದು ತಪ್ಪಾಯಿತು. ಮೊದಲೇ ಸಾವಿರ ರೂಪಾಯಿಗಳನ್ನು ಕೊಡೆಂದು ಕೇಳಿದ್ದರೆ, ಕೊಟ್ಟು ಬಿಡುತ್ತಿದ್ದೆನು; ಆದರೂ ಈಗ ನೀನು ಹೇಳಿದಂತೆ ಕೇಳುತ್ತೇನೆ. ನನ್ನನ್ನು ಪೋಲೀಸರ ಕೈಯಲ್ಲಿ ಕೊಟ್ಟು, ಮರ್ಯಾದೆಗೇಡು ಮಾಡಿಸಬೇಡ. ಅಣ್ಣ-ತಮ್ಮಂದಿರ ಜಗಳದಲ್ಲಿ ಪೋಲೀಸರೇತಕ್ಕೆ ಬೇಕು? ಆ ರೂಪಾಯಿಗಳು ನಿನ್ನವೇ ಆಗಲಿ, ಮತ್ತಾರವೇ ಆಗಲಿ ನಮ್ಮವಂತೂ ಅಲ್ಲ. ಕೊಡುತ್ತೇನೆ, ಒಯ್ದು ಬಿಡು. ತಪ್ಪಾಯಿತೆಂದು ಹೇಳಿದರೂ ನಿನ್ನ ಸಿಟ್ಟು ಇಳಿಯದಿದ್ದರೆ, ನೀನೇ ನಾಲ್ಕು ಹೊಡೆ. ಅಗ್ರಜನೆಂಬ ಪೂಜ್ಯ ಬುದ್ಧಿಯಿಂದ ಹ್ಯಾಗಾದರೂ ಸಹಿಸಿಕೊಳ್ಳುವೆನು; ಆದರೆ ನಿಷ್ಕರುಣಿಗಳಾದ ಪೋಲೀಸರ ಕಡೆಯಿಂದ ಮಾತ್ರ ಹೊಡಿಸಬೇಡ.'' ಎಂದು ದೈನ್ಯದಿಂದ ಹೇಳಿಕೊಂಡು ಅಣ್ಣನ ಕಾಲಿಗೆರಗಹೋದನು.

ತಮ್ಮನು ಕಣ್ಣೀರು ಸುರಿಸುತ್ತ ಮನಸ್ಸು ಕರಗುವಂತೆ ಹೇಳಿಕೊಂಡರೂ ವಿನಾಯಕರಾಯರಿಗೆ ದಯೆಬರಲಿಲ್ಲ. ಅವರು ಮತ್ತಿಷ್ಟು ಸಂತಪ್ತರಾಗಿ ಕೆಳದುಟಿಯನ್ನು ಕಚ್ಚುತ್ತ:—"ಲುಚ್ಚಾ, ತಪ್ಪಾಯಿತೆಂದರೆ ಬಿಡುವೆನೆ? ನಿನ್ನ ಜೀವವನ್ನು ತಕ್ಕೊಂಡೇ ಬಿಡುವೆನು ನಿಲ್ಲು.'' ಎಂದು ಒದರಿ ನುಡಿದು, ನಮಸ್ಕಾರ ಮಾಡುವದಕ್ಕಾಗಿ ಬಾಗಿದ್ದ ಮುರಲೀಧರನ

ತಲೆಗೆ ಚನ್ನಾಗಿ ಒದೆದು ಸಮೀಪದಲ್ಲಿ ನಿಂತಿದ್ದ ಹವಾಲದಾರನನ್ನು ಉದ್ದೇಶಿಸಿ:—"ಹೂಂ ಏನು ನೋಡುತ್ತೀರಿ? ತಳಿಸಿರಿ" ಎಂದು ಹೇಳಲು, ಅಪ್ಪಣೆಯ ಹಾದಿಯನ್ನೇ ನೋಡುತಲಿದ್ದ ಹವಾಲದಾರಸಾಹೇಬರು ವಿನಾಯಕರಾಯರ ಬಲವಾದ ಒದಿಕೆಯಿಂದ ಬಿದ್ದುಕೊಂಡಿದ್ದ ಮುರಲೀಧರನಿಗೆ ಏನೇನೋ ಅವಾಚ್ಯ ಶಬ್ದಗಳಿಂದ ಬೈಯ್ಯುತ್ತ ಹೊಡೆಯಹತ್ತಿದರು.

ಇದೆಲ್ಲವನ್ನು ನೋಡುತಲಿದ್ದ ಕಮಲಾ-ಸೀತಾಬಾಯಿಯವರಿಗೆ ದುಃಖವು ತಡೆಯಲಿಲ್ಲ. ಮುರಲೀಧರನು ಅಳಹತ್ತಲು, ಬಾಯಿಗೆ ಹೊಡೆಯುವದೂ ಪಕ್ಕಡಿಗೆ ಗುದ್ದುವದೂ ಇವೇ ಮೊದಲಾದ ನೋಡಬಾರದ ಕಟುಕತನದ ಕೃತಿಗಳಿಂದ ಸೀತಾಬಾಯಿಯು ಅನಿವಾರ್ಯ ದುಃಖಗೊಂಡು, ಕಣ್ಣೀರು ಸುರಿಸುತ್ತ ಮೇಲಕ್ಕೆ ಮುಖವೆತ್ತಿ:—ದೇವರೆ! ಈ ನೀಚತನವನ್ನು ನೋಡಲಾರೆನು. ಅಣ್ಣನು ಮುಂದೆ ನಿಂತು, ತಮ್ಮನನ್ನು ತಪ್ಪಿಲ್ಲದೆ ಪೋಲೀಸರ ಕೈಯಿಂದ ಮನಬಂದಂತೆ ಹೊಡಿಸುವದೆಂದರೆ, ಯಾವ ಲೋಕದ ನ್ಯಾಯವು? ಬಂಧುಪ್ರೇಮವು ಸ್ವಲ್ಪಾದರೂ ಇರಬಾರದೆ? ಹಾಯ್! ಹಾಯ್!! ದೇವಾ ನನ್ನ ಮಗನ ಈ ಆರ್ತಸ್ವರವನ್ನು ಕೇಳಲಾರೆನು. ಕಿವಿಯಲ್ಲಿ ಕಾಸಿದ ಸೀಸವನ್ನು ಸುರವಿದಂತಾಗುತ್ತದೆ. ಇದೆಲ್ಲ ಅನ್ಯಾಯವು ನನ್ನ ಕಣ್ಣಿಗೆ ಬೀಳದಂತೆ ಮೊದಲೇ ನನ್ನ ಕಣ್ಣು ಮುಚ್ಚಬಾರದೆ!" ಎಂದು ದೇವರಿಗೆ ಮೊರೆಯಿಡುತ್ತ ದೊಪ್ಪನೇ ನೆಲಕ್ಕೆಬಿದ್ದುಬಿಟ್ಟಳು; ಆದರೆ ಕಮಲಾಬಾಯಿಗೆಅತ್ತೆಯು ಸಮಯೋಚಿತ ಭಾಷಣಣಗಳಿಂದ ವಿನಾಯಕರಾಯರ ಸಿಟ್ಟು ಇಳಿಸದೆ ಸುಮ್ಮನೆಬಿದ್ದುಕೊಂಡದ್ದು ಸರಿಬರಲಿಲ್ಲ. ಈಗಆವಳುಮುಂದೆಬಂದುಹೃದಯ ದ್ರಾವಕ ಸ್ವರದಿಂದ:—"ರಾಯರೇ, ಈ ಹತಭಾಗ್ಯಳ ಮುಖನೋಡಿ ಇದೊಂದುಸಾರೆ ಮುರಲೀಧರನನ್ನು ಕ್ಷಮಿಸಿ ಬಿಡಿರಿ. ನಿಮ್ಮ ಸಾವಿರ ರೂಪಾಯಿಗಳನ್ನು ಅಗತ್ಯವಾಗಿ ಕೊಡುತ್ತೇನೆ. ಸರ್ವಪಾಲಿಗೂ ನಮ್ಮೆಲ್ಲರ ತಪ್ಪಾಗಿದೆ. ತಪ್ಪನ್ನು ನೀವು ಕ್ಷಮಿಸದೆ ಮತ್ತಾರು ಕ್ಷಮಿಸಬೇಕು? ಹಾಯ್! ಹಾಯ್!! ನೋಡಲಾರೆನು. ಹವಾಲದಾರಸಾಹೇಬರೇ! ನಿಮಗೆ ಕೈ ಮುಗಿಯುತ್ತೇನೆ. ಸಾಕುಮಾಡಿರಿ! ಕೈಬಿಗಿ ಹಿಡಿಯಿರಿ!! ಪೆಟ್ಟನ ನೋವು ತಾಳಲಾರದೆ ಹಿಂದೇಸವನೆ ಬಾಯಿಬಿಡುವ ಮುರಲೀಧರನ ಸುಂದರಮುಖವನ್ನು ನೋಡಿರಿ. ಸಾಹೇಬರೆ, ನಿಮಗೆ ಇನ್ನೂ ದಯೆಬರಲೊಲ್ಲದೆ?

ಇಷ್ಟಾಗಿ ಅವನು ಮಾಡಿದ ಅಂಥ ಮಹತ್ವದ ತಪ್ಪಾದರೂ ಯಾವದು? ನಿಮಗೆ ಹೊಡೆಯುವ ಪ್ರೀತಿ ಇದ್ದಲ್ಲಿ, ನನ್ನನ್ನು ಹೊಡೆಯಿರಿ." ಎಂದು ಬೇಡಿಕೊಂಡಳು.

ಕಮಲಾಬಾಯಿಯ ಈ ನಮ್ರ ಮಾತುಗಳನ್ನು ಕೇಳಿ ವಿನಾಯಕ ರಾಯರಿಗೆ ಸ್ವಲ್ಪ ದಯೆ ಬಂದಂತಾಯಿತು. ಅವರು ಒಂದು ಬಗೆಯ ವಿಚಿತ್ರನಗೆಯಿಂದ ನಕ್ಕು:—"ಕುಳಿಂದಸ್ವಾಮಿಯವರೇ, ಸಾಕುಮಾಡಿರಿ. ಕಮಲೇ, ಇದೊಂದು ಸಾರೆ ನಿಮ್ಮನ್ನು ಕ್ಷಮಿಸಿ ಬಿಟ್ಟದ್ದೇನೆ; ಇಲ್ಲದಿದ್ದರೆ, ನಿಮ್ಮೆಲ್ಲರ ಕೈಯಲ್ಲಿ ಬೇಡೀಹಾಕಿಸಿ ಬಿಡುತ್ತಿದ್ದೆನು. ಇನ್ನು ಮೇಲೆ ನನ್ನ ವಿರುದ್ಧ ವರ್ತಿಸಿದರೆ, ಇದಕ್ಕೂ ಹೆಚ್ಚಾಗಿ ಪೆಟ್ಟುತಿಂದೀರಿ. ಎಚ್ಚರವಿರಲಿ; ಹೂಂ ಮೊದಲು ರೂಪಾಯಿಗಳನ್ನು ತೆಗೆದುಕೊಡು. ನಿಲ್ಲಬೇಡ, ನಮಗೆ ಹೊತ್ತಾಗುವದು." ಎಂದು ನುಡಿದರು.

ಕಮಲಾಬಾಯಿಯು ಮುರಲೀಧರನನ್ನು ಹಿಡಿದೆಬ್ಬಿಸಿ, ಒಳಗೆ ಕಳಿಸಿ ರೂಪಾಯಿಯ ಗಂಟನ್ನು ತಂದು, ವಿನಾಯಕರಾಯರ ಮುಂದಿಟ್ಟಳು. ವಿನಾಯಕರಾಯರೂ,ಹವಾಲದಾರರೂ ಕೂಡಿ ರೂಪಾಯಿಗಳನ್ನೆಣಿಸಹತ್ತಿದರು. ಅದರಲ್ಲಿ ಇಪ್ಪತ್ತೈದು ರೂಪಾಯಿಗಳು ಕಡಿಮೆಯಾಗಲು, ವಿನಾಯಕರಾಯರು ಕಮಲಾಬಾಯಿಗೆ:—"ಕಮಲೇ, ಇಪ್ಪತ್ತೈದು ರೂಪಾಯಿಗಳು ಕಡಿಮೆ ಇರುವವಲ್ಲಾ? ಅವನ್ನು ಯಾವನಿಗೆ ಕೊಟ್ಟೆ?" ಎಂದು ವ್ಯಂಗಸ್ವರದಿಂದ ಕೇಳಿದರು. ಮಾನಧನಳಾದ ಕಮಲಾಬಾಯಿಯು ಈ ಕುತ್ಸಿತತನಕ್ಕೆ ಹೇಸಿಕೊಂಡು ಸಿಟ್ಟಾದರೂ, ಅದನ್ನು ಮೇಲೆತೋರಗೊಡದೆ ರಾಯರೇ, ಕ್ಷಮಿಸಬೇಕು. ನಿಮ್ಮಲ್ಲಿ ಒತ್ತಿ ಇಟ್ಟದ್ದ ಕಂಠಿಯ ಹಾರವನ್ನು ಬಿಡಿಸಿಕೊಂಡು ಬರಲಿಕ್ಕೆ ಹದಿನೈದು ರೂಪಾಯಿಗಳನ್ನೂ, ಉದ್ದರಿ ಅಂಗಡಿಯವರಿಗೆ ಹತ್ತು ರೂಪಾಯಿಗಳನ್ನೂ ಕೊಟ್ಟೆತು. ನಾಳೆಯೇ ಅಪ್ಪನಿಗೆ ಪತ್ರಬರೆದು ನಿಮ್ಮ ರೂಪಾಯಿಗಳನ್ನು ತರಿಸಿಕೊಡುತ್ತೇನೆ. ದಯಮಾಡಿ ಅಲ್ಲಿಯ ವರೆಗೆ ತಡೆಯಿರಿ, ಎಂದು ವಿನಯಸ್ವರದಿಂದ ಉತ್ತರವಿತ್ತಳು. ಇದನ್ನು ಕೇಳಿ ವಿನಾಯಕರಾಯರು ಕೋಪಗೊಂಡವರಂತೆ ದೊಡ್ಡ ಸ್ವರದಿಂದ:—"ನಿಮ್ಮಂಥ ಕಳ್ಳರ ನಂಬಿಗೆಯನ್ನು ಹಿಡಿಯುವ ಹಾಗಿಲ್ಲ. ಕಡಿಮೆಯಾದ ರೂಪಾಯಿಗಳ ಬದಲು ಆ ಕಂಠಿಯ ಹಾರವನ್ನು ತಾಇಲ್ಲಿ. ರೂಪಾಯಿಗಳನ್ನು ಕೊಟ್ಟಾಗ್ಗೆ ತೆಗೆದುಕೊಂಡು ಹೋಗುವಿ

ರಂತೆ. ಯಾಕೆ? ಸುಮ್ಮನೆ ನಿಂತುಕೊಂಡಿ? ಇಷ್ಟೊತ್ತಿನವರೆಗೆ ಮುರಲಿಯು ಅವಸ್ಥೆಯನ್ನು ನೋಡಿಲ್ಲವೇನು? ಈಗೆ ಹಾರವನ್ನು ಒಳ್ಳೇ ಮಾತಿನಿಂದ ಕೊಡುವಿಯೋ ಇಲ್ಲೋ? ಹೂಂ ಕುಳಿಂದ ಸ್ವಾಮಿಯವರೇ, ಇವಳಿಗೂ ಒಮ್ಮೆ ನಿಮ್ಮ ಕೈ ತೋರಿಸಿರಿ. ಗಂಡನಿಲ್ಲದ ಸ್ತ್ರೀಯರಿಗೆ ನತ್ತು-ಕಂಠಿಯ ಹಾರಗಳಂತೆ!" ಎಂದು ಗದ್ದರಿಸಿದರು.

ಕಮಲಾಬಾಯಿಯು ನಡುಗಿದಳು ಈ ನೀಚರು ಯಾವ ಹೊತ್ತಿನಲ್ಲಿ ಎಂಥ ದುಷ್ಕೃತ್ಯಗಳನ್ನು ಮಾಡಲಿಕ್ಕೂ ಹೇಸದ ಕುಲಕಂಟಕರೆಂದು ತಿಳಿದು ಮೊದಲು ಮನೆಯಿಂದ ತೊಲಗಿದರೆ ಸಾಕೆಂದು ಜೀವಕ್ಕಿಂತಲೂ ಅಧಿಕಪ್ರೀತಿಯಿಂದ ಪೆಟ್ಟಿಗೆಯಲ್ಲಿಟ್ಟದ್ದ ಹಾರವನ್ನು ತಂದು, ವಿನಾಯಕ ರಾಯರ ಮುಂದೆ ಒಗೆದಳು. ಬೆಲೆಯುಳ್ಳ ಕಂಠಿಯ ಹಾರವನ್ನು ನೋಡಿ ವಿನಾಯಕರಾಯರು ಹಿಗ್ಗುತ್ತ ಅದನ್ನು ಜೇಬಿನೊಳಗೆ ಹಾಕಿಕೊಂಡು ರೂಪಾಯಿಯ ಗಂಟನ್ನು ಬಾಗಿಲಲ್ಲಿ ಯಾವಕಾರಣದಿಂದಲೋ ಸುಮ್ಮನೆ ಕುಳಿತುಕೊಂಡಿದ್ದ ಮತ್ತೊಬ್ಬ ಸಿಪಾಯಿಯ ಕೈಯಲ್ಲಿಕೊಟ್ಟು, ತಾವೂ ಹವಾಲದಾರರೂ ಸಲಿಗೆಯಿಂದ ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ಮನೆಯಿಂದ ಹೊರಬಿದ್ದರು. ಅವರು ಬಾಗಿಲಲ್ಲಿ ತಮಗಾಗಿಯೇ ಕಾದು ಕೊಂಡಿದ್ದ ಟಾಂಗೆಯೊಳಗೆ ಕೂಡ್ರುವಷ್ಟರಲ್ಲಿ ಅಂಗಡಿಯಿಂದ ಮನೆಗೆ ಹೋಗುವ ಅದೇ ಓಣಿಯ "ಮಹದೇವಪ್ಪ" ಎಂಬ ಸದ್ಗೃಹಸ್ಥರು ವಿನಾಯಕರಾಯರನ್ನುದ್ದೇಶಿಸಿ:—"ನಮಸ್ಕಾರ ಸಾವುಕಾರರೇ, ದೂರಬರೋಣವಾಗಿತ್ತು?" ಎಂದು ಕೈಮುಗಿದು ಪ್ರಶ್ನೆ ಮಾಡಿದರು. ವಿನಾಯಕರಾಯರು ಪ್ರತಿನಮಸ್ಕರಿಸಿ—"ನಮ್ಮ ಗದಗಿನ ಒಬ್ಬ ವ್ಯಾಪಾರಸ್ಥನು ತಪ್ಪುಗ್ರಹಿಕೆಯಿಂದ ಮುರಲೀಧರನಿಗೆ ಕಳಿಸಿದ ಸಾವಿರರೂಪಾಯಿಗಳನ್ನು ಒಯ್ಯಲಿಕ್ಕೆ ಬಂದಿದ್ದೆನು." ಎಂದು ಉತ್ತರವಿತ್ತನು.

ಮಹದೇವಪ್ಪನವರು ಸ್ವಲ್ಪ ಆಶ್ಚರ್ಯಯುಕ್ತಮುದ್ರೆಯಿಂದ:—ಹೌದು. ಸಾವಿರ ರೂಪಾಯಿಗಳು ಮನಿಯಾರ್ಡರಾಗಿ ಬಂದಿವೆಯೆಂತಲೂ, ಇಂಥವರೇ ಕಳಿಸಿರುವರೆಂದು ತಿಳಿಯದ್ದಕ್ಕಾಗಿ ಬೆಳಗಾವಿಯಲ್ಲಿರುವ ರಂಗರಾಯರಿಗೆ ಪತ್ರಬರೆದಿರುವೆವೆಂತಲೂ ಮುರಲೀಧರರು ಮೊನ್ನೆ ಹೇಳಿದ್ದರು; ಆದರೆ ಸಾವುಕಾರರೇ, ಅದೆಂಥ ಗ್ರಹಿಕೆಯಿಂದ ನಿಮ್ಮ ವ್ಯಾಪಾರಸ್ಥರು ಇವರ ಮನೆಗೆ ರೂಪಾಯಿಗಳನ್ನು ಕಳಿಸಿದರು? ಇಷ್ಟಾಗಿ ಮೇಲ್ವಿಳಾ

ನವು ಇಂಗ್ಲಿಷಿನಲ್ಲಿ "ಮುರಲೀಧರ ಅಣ್ಣಾಜಿರಾವ ಕುಲಕರಣಿ" ಎಂದು ಸ್ಪಷ್ಟವಾಗಿ ಬರೆಯಲ್ಪಟ್ಟಿತ್ತಂತೆ; ಅಂದಮೇಲೆ ನನಗಿದು ವಿಚಿತ್ರವಾಗಿ ಕಾಣುತ್ತದೆ." ಎಂದು ಕೇಳಲು, ವಿನಾಯಕರಾಯರ ಮನಸ್ಸಿನಲ್ಲಿ ಏಕ ಕಾಲಕ್ಕೆ ಭಯ-ಕೋಪಗಳು ಉದ್ಭವಿಸಿದವು. ಆದರೂ ಅವನ್ನು ಬಹಿ ರಂಗಪಡಿಸದೆ:—"ಏನು ವಿಚಿತ್ರವೆಂದರೆ ಸುಳ್ಳುಸುಳ್ಳೇ ನೆವಹೇಳಿ, ರೂಪಾ ಯಿಗಳನ್ನೊಯ್ಯುತ್ತಾರೆಂದು ನಿಮ್ಮ ತಿಳವಳಿಕೆ ಇದ್ದಂತೆ ತೋರುತ್ತದೆ. ಮಹದೇವಪ್ಪನವರೇ, ನಾನು ಹೀಗೆ ಮಂದಿಯ ದುಡ್ಡನ್ನು ಅಪಹರಿಸುವ ವಂಚಕನಲ್ಲ. ಇಕೋ ನೋಡಿರಿ, ನಿಮಗೆ ಇಷ್ಟರಿಂದಲೂ ನಂಬಿಗೆಯಾಗ ದಿದ್ದರೆ ಈ ಪತ್ರವನ್ನು ಓದಿನೋಡಿರಿ; ಅಂದರೆ ತಾನೇ ತಿಳಿಯುವದು." ಎಂದು ವಂಚಕಸ್ವರದಿಂದ ನುಡಿದು, ತನ್ನ ಜೇಬಿನೊಳಗಿಂದ ಒಂದು ಪತ್ರ ವನ್ನು ತೆಗೆದುಕೆಟ್ಟು, ಅವಸರದಿಂದ:—"ಮಹದೇವಪ್ಪನವರೇ, ನಮ ಸ್ಕಾರ; ಅಪ್ಪಣೆಕೊಡಿರಿ. ಹೋಗಿಬರುತ್ತೇನೆ, ಅವಸರದ ಕೆಲಸವಿದೆ." ಎಂದುಹೇಳಿ, ಟಾಂಗೆಯನ್ನು ಹತ್ತಿ ಹೋಗಿಬಿಟ್ಟರು.

ಮಹದೇವಪ್ಪನವರು ಹಾಗೆಯೇ ಮುರಲೀಧರನ ಮನೆಗೆ ಬಂದು ದೀಪದ ಪ್ರಕಾಶದಲ್ಲಿ ಪತ್ರವನ್ನೋದಹತ್ತಿದರು. ಅದರಲ್ಲಿ ಗದಗಿನ 'ಮುರಾರಿಪಂತ'ನೆಂಬ ಒಬ್ಬ ವ್ಯಾಪಾರಸ್ಥನು ವಿನಾಯಕರಾಯನಿಗೆ 'ನೀವು ಊರಲ್ಲಿಲ್ಲವೆಂಬ ಸುದ್ದಿಯನ್ನು ಕೇಳಿ, ನಿಮ್ಮ ತಮ್ಮಂದಿರ ಹೆಸರಿನಿಂದ ನಿಮಗೆ ಕೊಡತಕ್ಕ ಸಾವಿರ ರೂಪಾಯಿಗಳನ್ನು ಮನಿಯಾರ್ಡರ ಮಾಡಿ ಕಳಿಸಿಕೊಟ್ಟಿರುತ್ತೇನೆ' ಎಂದು ಬರೆದಿತ್ತು. ಪತ್ರವನ್ನು ಓದುವದಾದ ಮೇಲೆ ಮಹದೇವಪ್ಪನವರು ಖಿನ್ನಮುದ್ರೆಯಿಂದ ಒಂದು ಕಡೆಗೆ ಸುಮ್ಮನೆ ಕುಳಿತುಕೊಂಡಿದ್ದ ಮುರಲೀಧರನನ್ನು ನೋಡಿ:—'ಯಾಕೆ? ಮುರಲೀಧರ ರಾಯರೇ, ಮಾತುಕಥೆಗಳಿಲ್ಲದೆ ಸುಮ್ಮನೆ ಕುಳಿತುಕೊಂಡಿರಿ? ವಿನಾಯಕ ರಾಯರು ತಮ್ಮ ರೂಪಾಯಿಗಳನ್ನೊಯ್ದದ್ದಕ್ಕೆ ನಿಮಗೆ ಚಿಂತೆಯಾಯಿ ತೇನು? ಎಂದು ಹಾಸ್ಯಮಾಡಿದರು. ಮುರಲೀಧರನು ದುಃಖಮಿಶ್ರಿತಸ್ವರ ದಿಂದ:—"ಮಹದೇವಪ್ಪನವರೇ, ಸ್ವಂತದ ಅಪಾರ ಸಂಪತ್ತನ್ನು ಕಳ ಕೊಂಡು, ಬಾಡಿಗೆಯ ಮನೆಯಲ್ಲಿರಹತ್ತಿದರೂ ಕೂಡ ಚಿಂತಿಸದ ನಾನು, ಪರರು ತಮ್ಮ ರೂಪಾಯಿಗಳನ್ನು ತಾವು ಒಯ್ದದ್ದಕ್ಕೆ ಚಿಂತಿಸುವೆನೇ? ಈ ಜಗತ್ತಿನ ಯಾವ ವಸ್ತುಗಳಲ್ಲಿಯೂ ನನ್ನ ಪ್ರೀತಿಯಿಲ್ಲ. ಅದೇಕೆ?

ಜೀವವು ಕೂಡಾ ನನಗೆ ಬೇಸರಿಟ್ಟು ಹೋಗಿದೆ; ಅಂದಮೇಲೆ, ಯಃಕಶ್ಚಿತ ದುಡ್ಡಿಗಾಗಿ ಚಿಂತಿಸುವ ಬಗೆ ಹ್ಯಾಗೆ?"

ಮ:—"ಹಾಗಾದರೆ, ಸದಾ ಉಲ್ಲಾಸಯುಕ್ತಸ್ವಭಾವದ ನೀವು ಈ ದಿವಸ ಇಷ್ಟೇಕೆ ಉದಾಸೀನರಾಗಿರುವಿರಿ? ಇಷ್ಟಾಗಿ ನೀವು ಸ್ವಲ್ಪ ಹೊತ್ತಿನ ಹಿಂದೆ ಅತಿಶಯ ಶೋಕಿಸಿದಂತೆ ನಿಮ್ಮ ಮುಖಚರ್ಯದಿಂದ ತಿಳಿಯಬರುತ್ತದೆ. ಎಲಾ ಇದೇನು! ನೋಡ ನೋಡುವಷ್ಟರಲ್ಲಿ ನಿಮ್ಮ ಕಣ್ಣೊಳಗಿಂದ ನೀರು ಸುರಿಯಹತ್ತಿದವಲ್ಲ!! ಇದೊಳ್ಳೆಯ ಆಶ್ಚರ್ಯವು! ಮುರಲೀಧರರೇ, ನಿಮ್ಮ ಕೋಮಲವಾದ ಗಲ್ಲಗಳಲ್ಲಿ ಬಾಸಾಳದ ಗುರುತುಗಳೇಕೆ? ಇದೇನು! ಉಟ್ಟಧೋತರವು ರಕ್ತ ಮುಳುಗಿದೆಯಲ್ಲ! ರಾಯರೇ, ನೀವೇ ಅಳುತ್ತ ಕುಳಿತಮೇಲೆ ನಮಗೆ ನಿಮ್ಮ ಸಂಬಂಧದ ಸಂಗತಿಗಳು ಹ್ಯಾಗೆ ತಿಳಿಯಬೇಕು? ನಿಮ್ಮ ಅಣ್ಣಂದಿರೇನಾದರೂ ಹೊಡೆದರೇನು?" ಎಂದು ದಯಾಮಿಶ್ರಿತ ಆಶ್ಚರ್ಯದಿಂದ ಕೇಳಿದರು. ಅದಕ್ಕೆ ಮುರಲೀಧರರು ಕಂಪಿತಸ್ವರದಿಂದ:—

ಮಹದೇವಪ್ಪನವರೇ, ಕ್ರೂರನಾದ ಅಣ್ಣನ ಉಪಟಳವನ್ನು ಸಹಿಸಲಾರೆನು. ನಾನು ಯಾರಿಗೂ ತಿಳಿಯದಂತೆ ಸಾವಿರ ರೂಪಾಯಿಗಳನ್ನು ಎತ್ತಿ ಹಾಕಬೇಕೆಂದು ಮಾಡಿದ್ದೆನಂತೆ! ಎಂಥ ಹೊಡೆಯುವದದು! ಪೋಲೀಸರು ಮಹಾ ನೀಚರು. ದಯಾಶೂನ್ಯರು. ಲಂಚತಿನ್ನುವದರಲ್ಲಂತೂ ಮಹಾಶೂರರು. ಅಂತೇ ಜನರು ಪೋಲೀಸಖಾತೆಯನ್ನು ನಿಂದಿಸುವರು. ಛೀ ಛೀ, ಈ ಜೀವಕ್ಕೆ ಸ್ವಲ್ಪೂ ಸುಖವಿಲ್ಲ. ರಜನೀಕಾಂತಣ್ಣನು ಈ ನೀಚನ ಉಪದ್ರವವನ್ನು ತಾಳಲಾರದೆ ದೇಶಾಂತರ ಹೋದಂತೆ ನಾನೂ ಎಲ್ಲಿಗಾದರೂ ಹೋಗಿ ತಿರಿದುಂಡು, ಈ ದುಃಖವನ್ನು ನೀಗಿಕೊಳ್ಳಬೇಕೆಂದು ಮಾಡಿರುವೆನು" ಎಂದು ನುಡಿದು ಅಳುತ್ತ ಅಳುತ್ತ ಆದ ವೃತ್ತಾಂತವನ್ನೆಲ್ಲ ತಿಳಿಸಿದನು.

ಇದೆಲ್ಲವನ್ನು ಕೇಳಿ ಮಹದೇವಪ್ಪನವರ ಅಂತಃಕರಣವು ತಳಮಳಿಸಿ ಹೋಯಿತು ವಿನಾಯಕರಾಯರ ಮೇಲಿನ ರೊಚ್ಚಿನಿಂದ ಅವರು ಸಂತಾಪಗೊಂಡು ಅವಡುಗಚ್ಚಿ:—"ವಿನಾಯಕರಾಯರ ಕುಬುದ್ಧಿಯೆಷ್ಟದು? ಹೀಗೆಯೇ ಗೋಳಾಡಿಸಿ, ರಜನೀಕಾಂತರಾಯರನ್ನು ಅಡವೀಪಾಲು ಮಾಡಿಬಿಟ್ಟರು. ಹುಟ್ಟಿಸಬಾರದ ಸುಳ್ಳು ಅಪವಾದಗಳನ್ನು ಹುಟ್ಟಿಸಿ, ನಿಮ್ಮನ್ನು

ಬರಿಗೈಯಿಂದ ಹೊರದೂಡಿದ್ದಲ್ಲದೆ ಮೇಲೆ ಇಂಥ ದುಷ್ಕೃತ್ಯಗಳೇ! ನೀವೇನು ಅವರ ರೂಪಾಯಿಗಳನ್ನು ಎತ್ತಿ ಹಾಕಬೇಕೆಂದು ಮಾಡಿದ್ದಿರಾ! ಎಂಥ ದುಷ್ಟತನವಿದು? ಬಂಧುಪ್ರೇಮವು ಸ್ವಲ್ಪಾದರೂ ಇರಬಾರದೇ? ಬಲವಿಲ್ಲದ ಕಾಲಕ್ಕೆ ನೆಲವೆದ್ದು ಬಡಿಯಿತೆಂಬಂತೆ ನಿಮ್ಮ ಅವಸ್ಥೆಯಾಯಿತಲ್ಲ! ರಾಯರೇ ನಡೆಯಿರಿ. ನಾಳೆಯೇ ಕೋರ್ಟಿನಲ್ಲಿ ದಾವೇ ದಾಖಲ ಮಾಡಿಬಿಡೋಣ. ನಿಮಗೆ ಬೇಕಾಗುವ ಕೋರ್ಟಿನ ಖರ್ಚನ್ನು ನಾನು ಕೊಡುತ್ತೇನೆ. ಮುಂಬಯಿ ಹಾಯಕೋರ್ಟಿನವರೆಗೆ ಹೋಗಲಿ. ನೋಡಿಯೇ ಬಿಡೋಣವಂತೆ" ಎಂದು ಉತ್ಸಾಹದಿಂದ ನುಡಿದರು.

ಮುರಲೀಧರನು:—"ಮಹದೇವಪ್ಪನವರೇ, ಅವ್ವನು ಅಡ್ಡೀಮಾಡದಿದ್ದರೆ, ಇಷ್ಟರೊಳಗಾಗಿಯೇ ನಿಮ್ಮಂಥ ಉದಾರಮನುಷ್ಯರ ಸಹಾಯದಿಂದ ದಾವೇ ಮಾಡಿಬಿಡುತ್ತಿದ್ದೆನು. ವಿನಾಯಕಣ್ಣನ ನೀಚತನದಿಂದಲೂ ರಜನೀಕಾಂತಣ್ಣನ ವಿಯೋಗದುಃಖದಿಂದಲೂ ಜರ್ಜರಳಾದ ತಾಯಿಯ ಆಜ್ಞೆಯನ್ನುಲ್ಲಂಘಿಸಿ, ಮತ್ತಿಷ್ಟು ನೋಯಿಸಬಾರದೆಂದೂ ಮತ್ತು ಅಣ್ಣನಿಗೆ ಎದುರು ನಿಲ್ಲುವದು ಪಾಪಕರವೆಂದೂ ಇಲ್ಲಿಯವರೆಗೆ ಸುಮ್ಮನಿರುವೆನು. ಸುಮ್ಮನಿದ್ದದ್ದರ ಫಲವನ್ನು ಈ ದಿವಸ ಭೋಗಿಸಿದಂತಾಯಿತು. ಇನ್ನು ಮುಂದೆ ಯಾರ ಮಾತನ್ನೂ ಕೇಳಲಾರೆನು. ರಂಗರಾಯರನ್ನು ದುಡ್ಡು ಕಳಿಸಿರೆಂದು ಹೀಗೆಯೇ ಎಷ್ಟು ದಿವಸ ಕೇಳಬೇಕು? ನಮ್ಮ ಕಮಲಾಬಾಯಿಯಂತೂ ನಮ್ಮ ವಿದ್ಯಾಭ್ಯಾಸಕ್ಕಾಗಿ ತನ್ನ ಹಿಂದೊಂದೇ ಆಭರಣಗಳನ್ನು ಮಾರಿಬಿಟ್ಟಳು! ಇದೇನು ನಿಮಗೆರಿಯದ ಸಂಗತಿಯಲ್ಲ. ಆಗಲಿ, ಇಲ್ಲಿಯವರೆಗೆ ಆದದ್ದು ಆಗಿಹೋಯಿತು. ಮಹದೇವಪ್ಪನವರೇ, ನಾಳೆ ಕೋರ್ಟಿಗೆ ಹೋಗಿಯೇ ಬಿಡೋಣ" ಎಂದು ರೊಚ್ಚಿನಿಂದ ಅಂದನು.

ಇಷ್ಟೊತ್ತಿನ ವರೆಗೆ ದುಃಖಿಸುತ್ತ ಬಿದ್ದುಕೊಂಡಿದ್ದ ಸೀತಾಬಾಯಿಯು ಈಗ ಮುರಲಿಯ ಮಾತಿನಿಂದ ಎದ್ದು ಕುಳಿತು:—"ಮುರಲೀಧರಾ, ವಿನಾಯಕನಂತೂ ವಿದ್ಯೆ ಕಲಿಯದವನು, ದುಷ್ಟನು, ತಿಳಗೇಡಿಯು; ಆದರೆ ನಿನ್ನಂಥ ವಿದ್ಯೆಕಲಿತ ಸದ್ಗುಣಿಯು ಸಿಟ್ಟನ್ನು ಶಾಂತಪಡಿಸದೆ ಇರುವದನ್ನು ನೋಡಿ, ನನಗೆ ಬಹಳ ವಿಷಾದವಾಗುತ್ತದೆ. ಯಜಮಾನರು ಅಂತ್ಯಕಾಲಕ್ಕೆ ಹೇಳಿದ ಬುದ್ಧಿಯ ಮಾತನ್ನುಮರೆತಿಯೇನು? ನಿಮ್ಮಅಣ್ಣನು ಸೌಖ್ಯವನ್ನು ಭೋಗಿಸಿದರೆ, ನಿನಗೇಕೆ ಮತ್ಸರವು? ಯಜಮಾನರು ಗಳಿಸಿದ

ಆಸ್ತಿಗೆ ನಾನೂ ಬಾಧ್ಯಸ್ಥನೆಂದು ನೀನು ತಿಳಿದಿರುವಿಯಷ್ಟೇ? ಅದೇ ಆಸ್ತಿಯನ್ನು ಯಜಮಾನರು ಗಳಿಸದಿದ್ದರೆ, ಹ್ಯಾಗೆ ಜೀವಿಸುತ್ತಿದ್ದಿ? ತಮ್ಮಾ, ಆ ದುಷ್ಟನನ್ನು ಹೆತ್ತವಳೂ ನಾನೇ, ಸದ್ಗುಣಿಯಾದ ನಿನ್ನನ್ನು ಹೆತ್ತವಳೂ ನಾನೇ. ದುಷ್ಟ-ಶಿಷ್ಟರು ಹೆತ್ತವರಿಗೆ ಸರಿಯಷ್ಟೇ? ಹೀಗಿದ್ದು, ನನಗೆ ಬೇಕಾದ ಒಬ್ಬ ಮಗನ ಪಕ್ಷಕಟ್ಟಿ ಬೇಡಾದ ಮಗನಿಗೆ ಕೇಡು ಬಗೆಯುವದು ಧರ್ಮವಿರುದ್ಧವಲ್ಲವೇ? ಈಗ ನೀನು ದಾವೆ ಮಾಡುವದಾದರೂ ಆ ಮನೆಯ ಸಲುವಾಗಿ. ಆ ಮನೆಯಾದರೂ ಹಾಗೆಯೇ ಬರುವದೇ? ಅದರ ಉದ್ದಕ್ಕೆ ದುಡ್ಡು ಖರ್ಚು ಮಾಡಬೇಕು. ಇಷ್ಟಾಗಿ ನಿನಗೆಲ್ಲಿ ಈ ಶ್ರೀಮಂತಿಕೆಯ ಹುಚ್ಚು ಹೊಕ್ಕಿತು? ದುಡ್ಡಿನಿಂದ ಈ ಜಗತ್ತಿನಲ್ಲಿ ಎಷ್ಟು ಅನರ್ಥಗಳುಂಟಾಗುತ್ತವೆಂಬದು ನಿನಗೆ ಗೊತ್ತಿಲ್ಲವೇ? ಅದೇ ದುಡ್ಡು ನಿನ್ನ ಹತ್ತಿರ ಇಲ್ಲಿಯ ವರೆಗೆ ಇದ್ದರೆ, ನೀನಿಷ್ಟು ಸದ್ಗುಣಿಯೂ ವಿದ್ಯಾವಂತನೂ ಆಗುತ್ತಿದ್ದಿಲ್ಲವೆಂದು ನನಗೆ ಅನಿಸುತ್ತದೆ; ಮತ್ತು ವಿನಾಯಕನಿಗೆ ಈ ತರದ ವಿಪರೀತ ದುರ್ಗುಣಗಳು ಹುಟ್ಟಲಿಕ್ಕೆ ಕಾರಣವೆಂದರೆ, ಆ ದುಡ್ಡೇ ಎಂದು ತಿಳಿ.”

ತಾಯಿಯ ಮಾತಿನಿಂದ ಮುರಲೀಧರನು ಬೇಸರಗೊಂಡು:— ಅವ್ವಾ, ನಿನ್ನ ವೇದಾಂತವು ನನಗೇನೂ ಸರಿಬರುವದಿಲ್ಲ ಬಿಡು. ತಂದೆಯವರಾದರೂ ಏನು ಹೇಳಿದ್ದರು? ಅವನ ಉಪಟಳದಲ್ಲಿಯೇ ನಿಮ್ಮ ಉತ್ಕರ್ಷವಿರುತ್ತದೆ! ಎಂದಲ್ಲವೇ? ಆಹಾಹಾ! ನೋಡಿದಿಯಾ? ಎಂಥ ನಮ್ಮ ಉತ್ಕರ್ಷವು! ಅಣ್ಣನು ಕೇಡುಬಗೆದರೆ, ಪ್ರತಿಯಾಗಿ ನಾವು ಕೇಡು ಬಗೆಯಬಾರದಂತೆ. ಇದೆಲ್ಲ ಮೂರ್ಖತನವು; ದುಡ್ಡಿನಿಂದ ಅನರ್ಥವಾಗುತ್ತಿದ್ದರೆ ಯಾರೂ ದುಡ್ಡು ಗಳಿಸುತ್ತಿದ್ದಿಲ್ಲ. ಅದೇ ಹಣವು ನಮ್ಮಲ್ಲಿದ್ದರೆ, ಅದಾವ ಪೋಲೀಸನು ನನ್ನ ಮೇಲೆ ಕೈಮಾಡುತ್ತಿದ್ದನು? ನಿನ್ನ ಹೇಳಿಕೆಯಂತೆ ನಡೆದರೆ ಕೈಯಲ್ಲಿ ಪರಟೆಯನ್ನು ಹಿಡಿಯುವ ಹೊತ್ತು ಬಂದೀತು. ನಾನಂತೂ ಇನ್ನು ಮೇಲೆ ಈ ಬಡತನದಲ್ಲಿ ಕೊಳೆಯಲಾರೆ. ನಮ್ಮ ಪಾಲಿಗೆ ಬರತಕ್ಕ ಆಸ್ತಿಯ ಬೆಲೆಯು ದಾವೆಗೇ ಖರ್ಚಾದರೂ ಚಿಂತೆಯಿಲ್ಲ. ಆ ನಿರ್ದಯನಿಗೆ ಲಾಭ ಮಾಡಿಕೊಡಲಾರೆನು. ಚೂರಿಯು ತನ್ನದೂ ಭಂಗಾರದ್ದೂ ಆದರೂ, ಘಾತಿಸದೆ ಬಿಡುವದಿಲ್ಲವಷ್ಟೇ? ಇನ್ನಾದರೂ ಆ ನೀಚನು ಕೇಡು ಬಗೆಯುವವನೇ! ಕಾರಣ ನನ್ನ ಆಯುಷ್ಯವೆಲ್ಲ ಸಾಲದಲ್ಲಿ ಸವೆದರೂ ಚಿಂತೆ

ಯಿಲ್ಲ. ಆ ದುಷ್ಟನ ಸೇಡು ತೀರಿಸಿಕೊಂಡೇ ಬಿಡುವೆನು, ಎಂದು ನಿಶ್ಚಯ ಸೂಚಕ ಸ್ವರದಿಂದ ಹೇಳಿದನು.

ಆಜ್ಞಾಧಾರಕನಾದ ಮಗನು ತನ್ನ ಮಾತನ್ನು ಅಲ್ಲಗಳೆಯುವದನ್ನು ನೋಡಿ ಆಗ ಸೀತಾಬಾಯಿಗೆ ಒಂದು ಬಗೆಯಿಂದ ಅತ್ಯಂತ ದುಃಖ ವಾಗಲು:—ಮುರಲೀ, ಹಡೆದವರ ಮಾತನ್ನು ಅಲ್ಲಗಳೆಯುವಷ್ಟು ಪಂಡಿತ ನಾಗಿರುವೆಯಾ? ನಿನಗೆ ಹೇಸಿಗೆಯಾದರೂ ಹ್ಯಾಗೆ ಬರುವದಿಲ್ಲ? ಇಲ್ಲಿಯ ವರೆಗೆ ನಿನ್ನನ್ನು ಆಜ್ಞಾಧಾರಕನೆಂದು ತಿಳಿದಿದ್ದೆನು; ಆದರೆ, ಅದೆಲ್ಲ ನನ್ನ ಭ್ರಾಂತಿಯೇಸರಿ! ಮಕ್ಕಳು ವಿದ್ಯೆಕಲಿತಮೇಲೆ ತಾಯಿಯ ಮಾತನ್ನು ಮೀರು ವದು ಈಗಿನ ಲೋಕರೂಢಿಯೇ ಅಲ್ಲವೇ? ನೀನಾದರೂ ಏನು ಮಾಡೀ? ನನ್ನ ದುರ್ದೈವವು ಇಷ್ಟೆಲ್ಲ ಮಾಡಿಸುತ್ತದೆ! ನಾಲ್ಕಾರು ಮಕ್ಕಳನ್ನು ಹೆತ್ತರೂ ನನ್ನ ಜೀವಕ್ಕೆ ಸುಖವೆಲ್ಲಿದೆ? ಉಪಾಯವಿಲ್ಲ. ಮುರಲೀ, ತಾಯಿಯ ಅಪ್ಪಣೆಯೆಂದರೆ, ವೇದವಾಕ್ಯವೆಂದು ತಮ್ಮನಿಗೆ ಬುದ್ಧೀ ಹೇಳುತ್ತಿದ್ದೆ ಯಲ್ಲಾ! ಎಲ್ಲಿದೆ ಆ ನಿನ್ನ ಬುದ್ಧಿಯು? ನನ್ನ ಅಪ್ಪಣೆಯನ್ನು ಮೀರಿ ಒಡ ಹುಟ್ಟಿದ ಅಣ್ಣನ ಮೇಲೆ ಮಾಡುವ ದಾವೆಯಿಂದ ನಿನಗೆ ಸುಖವಾಗುತ್ತಿ ದ್ದರೆ, ಅಗತ್ಯ ಮಾಡು. ಇನ್ನು ಮೇಲೆ ಯಾವ ವಿಷಯಕ್ಕೂ ನನ್ನನ್ನು ಕೇಳಬೇಡ, ಎಂದು ನುಡಿಯುವಷ್ಟರಲ್ಲಿ ಒಂದೆರಡು ಅಶ್ರುಬಿಂದುಗಳು ಪಟ ಪಟನೆ ನೆಲದ ಮೇಲೆ ಬಿದ್ದವು.

ಮುರಲೀಧರನಿಗೆ ತಾಯಿಯ ಮನಸ್ಸನ್ನು ನೋಯಿಸುವದೆಂದರೆ, ಸರಿಬರುತ್ತಿದ್ದಿಲ್ಲ. ಈಗ ಅವನು ಖಿನ್ನ ಮನಸ್ಕಳಾದ ತಾಯಿಯ ಮುಖ ವನ್ನು ನೋಡಿ, ಉಪಾಯವಿಲ್ಲದೆ:—ಅವ್ವಾ, ನಿನ್ನ ಅಪ್ಪಣೆಯನ್ನು ಪಾಲಿ ಸುವದರಿಂದ ಆಗುವ ಆನಂದವು ಆ ಶ್ರೀಮಂತಿಕೆಯಿಂದ ಹ್ಯಾಗಾದೀತು? ನಿನಗೆ ಸೇರದ ಕೆಲಸವನ್ನು ನಾನಾದರೂ ಯಾಕೆ ಮಾಡಲಿ ಬಿಡು. ಈಗಾ ದರೂ ನಿನಗೆ ಸಮಾಧಾನವಾಯಿತಷ್ಟೇ? ಎಂದು ವಿನಯದಿಂದ ಹೇಳಿ ಕೊಂಡು, ಮಹಾದೇವಪ್ಪನವರನ್ನು ಕುರಿತು:—ಮಹಾದೇವಪ್ಪನವರೇ, ನಿಮ್ಮ ಪರೋಪಕಾರ ಗುಣಕ್ಕಾಗಿ ನಾನು ಋಣಿಯಾಗಿರುವೆನು. ನಿಮ್ಮ ಹೇಳಿಕೆಯು ಯೋಗ್ಯವಿದ್ದದರಿಂದ ಅದರಂತೆ ದಾವೇಮಾಡಿ, ಪಾಲು ತೆಗೆ ದುಕೊಳ್ಳಬಹುದಾಗಿದೆ; ಆದರೆ, ತಾಯಿಯ ಮಾತನ್ನು ಮೀರಲಿಕ್ಕೆ ಬರು ವದಿಲ್ಲ; ಅದಕ್ಕಾಗಿ ತಾವು ಕ್ಷಮಿಸಬೇಕು, ಎಂದು ನಮ್ರಭಾವದಿಂದ

ನುಡಿದನು.

ಇದೆಲ್ಲವನ್ನು ಕೇಳಿ, ಮಹಾದೇವಪ್ಪನವರಿಗೆ ಪರಮಾಶ್ಚರ್ಯವಾಯಿತು; ಮುರಲೀಧರನ ಈ ವಿಚಿತ್ರ ಮನೋನಿಗ್ರಹದಿಂದ ಸಂತೋಷಬಟ್ಟು:—"ಧನ್ಯ ಧನ್ಯ! ಮುರಲೀಧರರೇ, ನಿಮ್ಮ ಮಾತೃಭಕ್ತಿಯು ಅಚಲವಾದದ್ದು. ಇದರಿಂದ ನಿಮಗೆ ಉತ್ತರೋತ್ತರ ಕಲ್ಯಾಣವಾಗದೆ ಇರದೆಂದು ನನ್ನ ಮನೋದೇವತೆಯು ಹೇಳುತ್ತದೆ." ಎಂದು ಸ್ತುತಿಸುತ್ತಿರುವಷ್ಟರಲ್ಲಿ ಮಕರಂದನೆಂಬ ಮುರಲೀಧರನ ತಮ್ಮನು ಓದುವ ಕೋಣೆಯಿಂದ ಬಂದನು. ಅಷ್ಟರಲ್ಲಿ ಊಟದ ಹೊತ್ತಾದ್ದರಿಂದ ಮಹಾದೇವಪ್ಪನವರು, ವಿನಾಯಕರಾಯರು ಕೊಟ್ಟ ಪತ್ರವನ್ನು ಜೋಪಾನ ಮಾಡಿ ಇಡಲಿಕ್ಕೆ ಮುರಲೀಧರನ ಕೈಯಲ್ಲಿ ಕೊಟ್ಟು, ಮನೆಗೆ ಹೊರಟರು. ಅಣ್ಣನು ಒಯ್ದ ಕಂಠಿಯ ಹಾರವನ್ನು ತಿರುಗಿ ತರಲಿಕ್ಕೆ ಇಪ್ಪತ್ತೈದು ರೂಪಾಯಿಗಳನ್ನು ಕೈಗಡವಾಗಿ ಮಹಾದೇವಪ್ಪನವರಿಂದ ಇಸಕೊಂಡು ಬರಲಿಕ್ಕೆ ಮಕರಂದನೂ ಅವರೊಂದಿಗೆ ಹೋದನು.

———

## ಎರಡನೆಯ ಪರಿಚ್ಛೇದ.



ಧಾರವಾಡದ ಅಣ್ಣಾಜಿರಾವ ಕುಲಕರಣಿ ಇವರ ಹೆಸರನ್ನು ಕೇಳದ ಮನುಷ್ಯನು ಕರ್ನಾಟಕಸ್ಥರಲ್ಲಿ ಅಪರೂಪ. ಅತಿ ಬಡತನದಿಂದ ವಿದ್ಯಾಭ್ಯಾಸ ಮಾಡಿ, ಮೊದಲು ಧಾರವಾಡ ಟ್ರೇನಿಂಗ ಕಾಲೇಜದ ಸಂಸ್ಕೃತ ಗುರುಗಳಾಗಿ, ತಮ್ಮ ಪ್ರಭಾವದಿಂದೇರುತ್ತೇರುತ್ತ ತಮ್ಮ ನಾಲ್ವತ್ತನೇ ವರುಷದ ವಯಸ್ಸಿಗೆ ವಿದ್ಯಾಖಾತೆಯ ಅಸಿಷ್ಟಂಟ ಡಾಯರೆಕ್ಟರರಾದರು. ಪ್ರತಿತಿಂಗಳಿಗೆ ಐದುಸಾವಿರ ರೂಪಾಯಿ ಪಗಾರದಂತೆ ಐದುವರ್ಷಗಳವರೆಗೆ ಕೆಲಸಮಾಡಿ, ಧಾರವಾಡ ಮಾಳಮಡ್ಡಿಯಲ್ಲಿಯೇ ಒಂದು ಸುಂದರವಾದ ಬಂಗಲೆಯನ್ನು ಕಟ್ಟಿಸಿದ್ದಲ್ಲದೆ ವಿಪುಲ ಧನಸಂಗ್ರಹವನ್ನೂ ಮಾಡಿದರು; ಆದರೆ ವಿಧಾತನು ಇವರು ಪಂಡಿತರು; ಇವರು ಪಾಮರರು; ಎಂಬ ಭೇದವನ್ನು ಲಕ್ಷಿಸುವದಿಲ್ಲವಷ್ಟೇ! ಅಣ್ಣಾಜಿರಾಯರು ತಮ್ಮ ೪೬ ನೆಯ ವರುಷದ ವಯಸ್ಸಿಗೆ ಇಡೀ ಕರ್ನಾಟಕವನ್ನೇ ಶೋಕಸಾಗರದಲ್ಲಿ ಮುಳುಗಿಸಿ ಇಹಲೋಕದ ಯಾತ್ರೆಯನ್ನು ಮುಗಿಸಿಕೊಂಡರು!

ಡಾಯರೆಕ್ಟರರು ಕೈಲಾಸವಾಸಿಗಳಾಗುವ ಕಾಲಕ್ಕೆ ನಾಲ್ವರು ಪುತ್ರರಿದ್ದರು. ಅವರಲ್ಲಿ ರಜನೀಕಾಂತನೆಂಬ ಜ್ಯೇಷ್ಠಪುತ್ರನು ಇಂಗ್ಲಿಷಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದ್ದನು. ರಜನೀಕಾಂತನು ಸದ್ಗುಣಿಯೂ, ತೀಕ್ಷ್ಣಬುದ್ಧಿಯುವನೊ, ಸಾಧುಸ್ವಭಾವದವನೂ ಇದ್ದದರಿಂದ ಮತ್ಸರಿಯೂ ನೀಚನೂ ಆದ ತಮ್ಮನಿಗೆ ಇದು ಸಹನವಾಗಲಿಲ್ಲ; ವಾಚಕರೇ, ಆ ಮತ್ಸರಿಯು ಯಾರೆಂಬುದು ನಿಮಗೆ ಹೊಳೆಯಿತೇನು? ಹಿಂದಿನ ಪ್ರಕರಣದಲ್ಲಿ ತನ್ನ ತಮ್ಮನನ್ನು ಪೋಲೀಸರಿಂದ ಹೊಡೆಯಿಸಿದ ಪಾಪಿಯಾದ ವಿನಾಯಕನೇ ಅವನು. ಮುರಲೀಧರ-ಮಕರಂದರೆಂಬವರು ವಿನಾಯಕನಿಗಿಂತ ಚಿಕ್ಕವರು. ಇರಲಿ.

ತಂದೆಯು ಸತ್ತನಂತರ ವಿನಾಯಕನು, ಅಣ್ಣನ ಅಭ್ಯಾಸದ ಪುಸ್ತಕಗಳನ್ನು ಗೊತ್ತಿಲ್ಲದಂತೆ ಸುಡುವದು, ಓದುತ್ತ ಕುಳಿತಾಗ್ಗೆ ಹಿದರಾಡುವದು, ದೀಪ ಆರಿಸುವದು, ಸುಮ್ಮಸುಮ್ಮನೆ ಬೈಯುವದು ಇವೇ ಮೊದಲಾದ ನೀಚ ಕೃತ್ಯಗಳನ್ನು ಮಾಡಹತ್ತಿದನು. ರಜನೀಕಾಂತನು ತಮ್ಮನಿಗೆ ಅನೇಕ ಸಾರೆ ಬುದ್ಧಿಹೇಳಿದನು; ಆದರೂ ಅದರಿಂದ ಸ್ವಲ್ಪೂ ಪ್ರಯೋಜನವಾಗದೆ ಇದ್ದದರಿಂದ ಖಿನ್ನ ಮನಸ್ಕನಾಗಿ ಹಿಂದು ದಿನ ತಾಯಿಗೆ:— ಅವ್ವಾ, ಇನ್ನು ನಾನು ವಿನಾಯಕನ ಉಪದ್ರವನ್ನು ತಾಳಲಾರೆನು. ಅಪ್ಪನು ತೀರಿಕೊಂಡಾಗಿನಿಂದ ನನ್ನ ಅಭ್ಯಾಸವೇ ಸಾಗದಂತಾಗಿದೆ. ಅಭ್ಯಾಸದ ಪುಸ್ತಕಗಳು ಹಿಂದೂ ಉಳಿಯಲೊಲ್ಲವು. ಅವನಂತೆಯೇ ನಾನೂ ಅವನಿಗೆ ತಿರಿಗಿ ನಿಂತು ಕೇಡು ಬಗೆಯುವದು ತರವಲ್ಲ; ಕಾರಣ ಇಬ್ಬರಿಗೂ ಕೇಡಾಗದಂಥ ತಕ್ಕ ಉಪಾಯುವನ್ನು ಹೇಳು, ಎಂದು ಕೇಳಲು, ತಾಯಿಯು:—ಮಗೂ, ನೀನನ್ನುವದು ನಿಜವು. ವಿನಾಯಕನ ದುರ್ಗುಣಗಳಿಂದ ನನಗೂ ಬೇಸರಿಟ್ಟುಹೋಗಿದೆ; ಆದರೆ ವಿನಾಯಕನ ನೀಚ ಕೃತಿಗಳಿಗೆ ನೀವು ಪ್ರತಿಯಾಗಿ ನೀಚ ಕೃತ್ಯಗಳನ್ನು ಮಾಡಿ ಮನೆತನದ ಕೀರ್ತಿಗೆ ಕಲಂಕವನ್ನುಂಟುಮಾಡಬೇಡಿರಿ; ಎಂದು ನುಡಿದು ಉಸುರ್ಗರೆದಳು.

ರಜನೀಕಾಂತ:—ಅವ್ವಾ, ನನಗಾದರೂ ಅಪ್ಪಾಜಿಯುವರ ಅಪ್ಪಣೆಯು ಸ್ಮರಣೆಯಲ್ಲಿದೆ. ಆದರೆ ಮಾಡಬೇಕೇನು? ಇಲ್ಲಿದ್ದರೆ, ವಿನಾಯಕನ ಮತ್ಸರತನವನ್ನು ನೋಡಿ ಮನಸ್ಸು ಬಿಗಿಹಿಡಿಯುವದಾಗದು. ಕಣ್ಣು ಮುಚ್ಚಿಕೊಂಡು ಎಲ್ಲಿಗಾದರೂ ಹೋಗುವದೇ ಲೇಸು.

ಸೀತಾಬಾಯಿ:—ತಮ್ಮಾ, ಶ್ರೀಮಂತಿಕೆಯ ಸವಿಯೂಟಗಳನ್ನುಂಡು ಬೆಳೆದ ನೀನು, ನಿರಾಶ್ರಿತನಾಗಿ ಹೋಗುವದಾದರೂ ಎಲ್ಲಿಗೆ? ಬೆಳಗಾವಿಗೆ ಹೋಗಬೇಕೆಂದು ಮಾಡಿರುವಿಯೇನು?

ರ:—ಈ ಕರ್ನಾಟಕವನ್ನೇ ಬಿಟ್ಟು ಹೋಗುತ್ತೇನೆ. ಇಲ್ಲದಿದ್ದರೆ ನನ್ನ ವಿದ್ಯಾಭ್ಯಾಸವೇ ಆಗದು.

ಸೀ:—ಮಗೂ, ಹೀಗೆ ಮಾಡಬೇಡ. ಧನಿಕರ ಹೊಟ್ಟೆಯಲ್ಲಿ ಹುಟ್ಟಿ, ತಿರಿದುಂಡು ನೀನು ವಿದ್ಯೆ ಕಲಿಯುವದಾದರೂ ಹ್ಯಾಗೆ? ಇಷ್ಟಾಗಿ ಇನ್ನು ಒಂದೆರಡು ವರ್ಷಗಳಲ್ಲಿ ಪ್ರಬುದ್ಧಳಾಗುವ ಕಮಲಾಬಾಯಿಗೆ ಏನು ಹೇಳಲಿ? ಜನರು ಏನೆಂದಾರು? ತಮ್ಮಾ, ನಾನು ಹೇಳಿದಂತೆ ಕೇಳು. ಹ್ಯಾಗಾದರೂ ಮಾಡಿ, ವಿನಾಯಕನ ಕಾಟವನ್ನು ತಾಳಿಕೊಂಡಿರು.

ರ:—ನನ್ನಿಂದ ಇನ್ನು ಅರಗಳಿಗೆಯಾದರೂ ತಾಳಿಕೊಂಡಿರುವದಾಗದು; ನನಗೆ ಸಂಸಾರದ ಆಶೆಯಿಲ್ಲ.

ಸೀ(ಕಣ್ಣಿಗೆ ನೀರುತಂದು):--ಹೀಗೆಂದರೆ ಉಪಾಯವಿಲ್ಲ. ಕಾಂತೂ, ಇಷ್ಟೆಲ್ಲವನ್ನು ಲೆಕ್ಕಿಸದೆ ನೀನು ಹೋಗುವದೇ ಆದರೆ, ವಿನಾಯಕನೊಬ್ಬನನ್ನೇ ಬಿಟ್ಟು ನಾವೆಲ್ಲರೂ ಬರುತ್ತೇವೆ; ಕರೆದುಕೊಂಡು ಹೋಗಿಬಿಡು. ಇಂದಿಲ್ಲ ನಾಳೆಯಾದರೂ ಆ ಕಟಕನು ನಮಗೂ ಮೋಸ ಮಾಡುವವನೇ; ಇಲ್ಲವೆ, ಕೊಡುವದನ್ನು ಕೊಟ್ಟು ಅದೇ ದುಷ್ಟನನ್ನು ಮನೆಬಿಟ್ಟು ಹೊರಗೆ ಹಾಕಿಬಿಡೋಣ; ಅಂದರೆ ನಿನಗೂ ಸುಖವಾಗುತ್ತದೆ. ಆವನಿಗೂ ಸುಖವಾಗುತ್ತದೆ; ಹೀಗೆ ಮಾಡುವದೇ ನನಗೆ ಸಮಂಜಸವಾಗಿ ತೋರುತ್ತದೆ. ಇದಕ್ಕೆ ನೀನೇನೆನ್ನುವಿ?

ರ:—ಅವ್ವಾ, ನಾವೆಲ್ಲರೂ ಒಂದಾಗಿ ವಿನಾಯಕನೊಬ್ಬನನ್ನೇ ಬೇರೆ ಇಟ್ಟರೆ, ನಿನಗೆ ಜನರು ಅಪವಾದ ಕೊಡಲಿಕ್ಕಿಲ್ಲವೆ? ಬೇಡ-ಬೇಡ, ನನ್ನೊಬ್ಬನ ದೆಸೆಯಿಂದ ನೀವೆಲ್ಲರೂ ಅಪವಾದವ ಹೊರುವದು ಸರ್ವಥಾ ಬೇಡ. ಕಷ್ಟವಾದರೆ ನನಗೊಬ್ಬನಿಗೇ ಆಗಲಿ; ಅವ್ವಾ ಹೋಗಿಬರುತ್ತೇನೆ, ಅಪ್ಪಣೆಕೊಡು. ನನ್ನ ಸುಖದ ಬಗ್ಗೆ ನೀನು ಚಿಂತಿಸಬೇಡ. ನಿನ್ನ ಮಂಗಲಾಶೀರ್ವಾದವೊಂದಿದ್ದರೆ ಆಯಿತು; ಅದು ಉರಿಯುವ ಕಿಚ್ಚಿನಲ್ಲಾದರೂ ನನ್ನನ್ನು ಸಂರಕ್ಷಿಸುವದು.

ಸೀ(ಅಶ್ರುಪೂರ್ಣ ದೃಷ್ಟಿಯಿಂದ):—ಕಾಂತೂ, ನನಗೆ ಬಹಳ ಕಷ್ಟ

ವಾಗುತ್ತದೆ. ನಿನಗೆ ವಿದೇಶಿಯಾಗಲಿಕ್ಕೆ ಅಪ್ಪಣೆಕೊಟ್ಟು, ನಾನು ಹ್ಯಾಗೆ ನಿಶ್ಚಿಂತೆಯಿಂದಿರಲಿ? ಯಜಮಾನರೊಂದಿಗೆ ನನ್ನ ಎಲ್ಲ ಸುಖಗಳೂ ಕೈಬಿಟ್ಟು ಹೋದವೆಂಬಂತೆ ತೋರುತ್ತದೆ. ಆಗಲಿ, ತಮ್ಮಾ, ನಿನ್ನ ಜೀವಕ್ಕೆ ಸುಖ ವಾಗುವಲ್ಲಿ ಇದ್ದುಬಿಡು. ನಿನಗೆ ದೇವರು ಉದಂಡಾಯುಷ್ಯವನ್ನು ಕೊಡಲಿ! ಆದರೆ ತಿರುಗಿ ನಿನ್ನ ಭೆಟ್ಟಿಯು ಎಂದು ಹ್ಯಾಗಾಗಬೇಕು? ಚಿಕ್ಕ ತಮ್ಮಂದಿರನ್ನು ಮಾತ್ರ ಮರೆಯಬೇಡ, ಕಂಡೆಯಾ?

ರ:—ನನ್ನ ವಿದ್ಯಾಭ್ಯಾಸವು ಮುಗಿದು ತಂದೆಯಂತೆ ಯಾವದಾದ ರೊಂದು ದೊಡ್ಡ ನೌಕರಿಯಲ್ಲಿ ಸೇರಿದನಂತರವೇ, ನನ್ನ ನಿಮ್ಮ ಭೆಟ್ಟಿಯು, ಎಂದು ನುಡಿದು, ಅಶ್ರುಗಳು ಧಾರೆಗಟ್ಟಿ ಇಳಿಯುತ್ತಿರಲು, ತಾಯಿಯ ಪಾದಕ್ಕೆ ನಮಸ್ಕಾರಮಾಡಿ, ಹೋದವನು ತಿರುಗಿ ಬರಲಿಲ್ಲ; ಮತ್ತು ಇಂಥಲ್ಲಿ ಇರುವೆನೆಂದು ಕೂಡ ಯಾರಿಗೂ ತಿಳಿಸಲಿಲ್ಲ. ಆ ರಜನೀಕಾಂತನ ವಿಯೋಗ ದುಃಖವು ಎಲ್ಲರನ್ನು ಬಾಧಿಸಿದರೂ, ವಿನಾಯಕನನ್ನು ಮಾತ್ರ ಬಾಧಿಸಲಿಲ್ಲ! ಅವನಿಗೆ ಸಂತೋಷವೇ ಆಯಿತೆಂದು ಬೇರೆ ಹೇಳಬೇಕಾಗಿಲ್ಲ.

ಮುಂದೆ ನಾಲ್ಕೈದು ವರ್ಷಗಳು ಕಳೆದ ಬಳಿಕ ಪ್ರಬುದ್ಧಳಾದ ಕಮ ಲಾಬಾಯಿಯು, ತವರು ಮನೆಯಲ್ಲಿರುವದು ಅಪವಾದಕ್ಕೆ ಕಾರಣವೆಂದು ಬಗೆದು, ಧಾರವಾಡಕ್ಕೆ ಬಂದು, ಅತ್ತೆಯ ಶುಶ್ರೂಷೆಮಾಡುತ್ತ ಇರಹತ್ತಿ ದಳು. ಇಷ್ಟರೊಳಗಾಗಿ ವಿನಾಯಕನ ಹೆಂಡತಿಯೂ ಬಂದಿದ್ದಳು. ಹೀಗೆ ನಾಲ್ಕು ವರ್ಷ ನಡೆಯುವಷ್ಟರಲ್ಲಿ ಲಗ್ನವಾಗದೆ ಇದ್ದ ಇಬ್ಬರು ತಮ್ಮಂದಿರೂ ಪ್ರಬುದ್ಧರಾಗಿ, ಮುರಲಿಯು ಇಂಗ್ಲಿಷ ೭ನೆಯ ಇಯತ್ತೆಯನ್ನೂ, ಮಕ ರಂದನು ಕನ್ನಡ ೭ನೆಯ ಇಯತ್ತೆಯನ್ನೂ ಕಲಿಯ ಹತ್ತಿದರು. ಇದೂ ಆ ಮತ್ಸರಿಗೆ ಸೇರಲಿಲ್ಲ. ಇಷ್ಟಾಗಿ ವಿನಾಯಕನ ಪತ್ನಿಯಾದ ನೀಲಗಂಗಾ ಬಾಯಿಯೆಂಬವಳು ಜಾತ್ಯಾ ಕುಟಿಲ ತಂತ್ರಗಾರಳಿದ್ದು, ಒಂದು ಹೆಣ್ಣು ಶಿಶುವನ್ನು ಹೆತ್ತಿದ್ದಳು. ಅಂದಮೇಲೆ ಕೇಳುವದೇನು? ಅವಳ ಅಪ್ಪಣೆಯಿ ಲ್ಲದೆ ಮನೆಯೊಳಗಿನ ಒಂದು ಕಡ್ಡಿಯು ಕೂಡಾ ಕದಲಲಿಕ್ಕೆ ಬಾರದು. ಮೊದಮೊದಲು ಮುರಲೀಧರ-ಮಕರಂದರಿಗೆ ಶಾಲೆಯ ಪುಸ್ತಕಗಳು ವರ್ಜ್ಯ ವಾದವು. ತಪ್ಪಿಲ್ಲದೆ ಬಾಯಿಗೆ ಬಂದಂತೆ ಬೈಯುವದೂ, ಹೊಡೆಯುವದೂ ನಡೆದದ್ದೇ. ಇದನ್ನೂ ಅಗ್ರಜನೆಂಬ ಪೂಜ್ಯ ಬುದ್ಧಿಯುಳ್ಳ ಆ ಬಡ ಪ್ರಾಣಿ ಗಳು ಸಹಿಸಿಕೊಂಡವು; ಆದರೆ ಸುಶೀಲೆಯಾದ ಕಮಲಾಬಾಯಿಯ ಪಾತಿ

ಪ್ರತ್ಯದ ವಿಷಯಕ್ಕೆ ನೀಲಗಂಗಾಬಾಯಿಯು ಅನೇಕ ಸುಳ್ಳು ಅಪವಾದಗಳನ್ನು ಹುಟ್ಟಿಸಿಬಿಟ್ಟಳು! ಸೇರಲಾರದವರು ಎಷ್ಟು ನಿಂದಿಸಿದರೂ ನನ್ನ ಪಾತಿವ್ರತ್ಯವು ಬೇರೆ ಕೆಡುವದಿಲ್ಲವಷ್ಟೇ? ಎಂದು ತಿಳಿದು, ಕಮಲಾಯಿಯು ಸಮಾಧಾನದಿಂದಲೇ ಇದ್ದಳು; ಕಮಲಾಬಾಯಿಯ ಈ ಸಮಾಧಾನದಿಂದ ನೀಲಗಂಗಾಬಾಯಿಯು ಅಸಮಾಧಾನಪಟ್ಟರೂ ತನ್ನ ನಿಂದ್ಯ ಕರ್ತವ್ಯವನ್ನೇನೂ ಬಿಡಲಿಲ್ಲ. ಯುಕ್ತಿಪ್ರಯುಕ್ತಿಗಳಿಂದ ಕಪಟನಾಟಕವನ್ನು ಹೂಡಿ, ಕಡೆಗೆ ಮುರಲೀಧರನು ತನ್ನನ್ನು ಪಾಪದೃಷ್ಟಿಯಿಂದ ನೋಡುತ್ತಾನೆಂಬ ಪ್ರಯೋಗವನ್ನು ಹಳ್ಳೀ ಮನೋರಂಜಕವಾಗಿ ತೋರಿಸಿಬಿಟ್ಟಳು. ಅಂದಮೇಲೆ ಆ ತಾಯಿಮಕ್ಕಳಿಗೆ ಎಷ್ಟು ತಾಪವಾಗಿರಬಹುದು? ಸೀತಾಬಾಯಿಯಂತೂ ಕಳವಳಗೊಂಡು, ಇಲ್ಲಿದ್ದರೆ ಇನ್ನು ಮೇಲೆ ಯಾವ ಹೊತ್ತಿನಲ್ಲಿ ಎಂಥ ಅಪವಾದಗಳು ಹುಟ್ಟುತ್ತವೆಂಬದರ ನಿಯಮವಿಲ್ಲವೆಂದು ತಿಳಿದು, ಕಮಲಾಬಾಯಿ ಮುರಲೀಧರ ಮಕರಂದರೊಂದಿಗೆ ಉಟ್ಟ ಅರಿವೆಯಮೇಲೆ ಹೊರಬಿದ್ದು ಲೈನಬಜಾರದೊಳಗಿನದೊಂದು ಬಾಡಿಗೆಯ ಮನೆಯಲ್ಲಿರಹತ್ತಿದರು. ಇದರಿಂದ ವಿನಾಯಕ-ನೀಲಗಂಗಾಬಾಯಿಯವರಿಗಾದ ಸಂತೋಷವನ್ನು ವರ್ಣಿಸಲಳವಲ್ಲ!

ಮೊದಮೊದಲು ವರ್ಷಾರು ತಿಂಗಳುಗಳ ವರೆಗೆ ವಿನಾಯಕನು ತಮ್ಮಂದಿರ ಹೊಟ್ಟೆಯ ಖರ್ಚಿಗೆ ಕೆಲವು ರೂಪಾಯಿಗಳನ್ನು ಆಗಾಗ್ಗೆ ಕೊಡುತ್ತಿದ್ದನು. ಮುಂದೆ ಮುರಲೀಧರನು ಮುಂಬೈಗೆ ಮ್ಯಾಟ್ರಿಕ್ ಪರೀಕ್ಷೆಗೆ ಹೋಗುವ ದಿನಗಳು ಸಮೀಪಿಸಲು, ಹಿಮ್ಮಿಂದೊಮ್ಮೆ ರೂಪಾಯಿ ಕೊಡುವದನ್ನು ನಿಲ್ಲಿಸಿ:—"ತಂದೆಯು ಗಳಿಸಿದ್ದನ್ನು ನೀವೇ ತಿಂದು ಹಾಳುಮಾಡಿ ಬಿಟ್ಟಿರಿ. ಇನ್ನು ಮೇಲೆ ದುಡಿದು ತಿನ್ನಿರಿ" ಎಂದು ಸ್ಪಷ್ಟವಾಗಿ ಹೇಳಿದನು. ಮುರಲೀಧರ-ಮಕರಂದರಂತೂ ವಿದ್ಯೆಕಲಿಯತಕ್ಕವರು. ಪ್ರತಿತಿಂಗಳೂ ಅವರಿಗೆ ಏನಿಲ್ಲೆಂದರೂ ಎಂಟು-ಹತ್ತು ರೂಪಾಯಿಗಳು ಬೇಕಾಗುತ್ತಿದ್ದದರಿಂದ ಅವರು ದುಡಿದು ಅತ್ತಿಗೆ-ತಾಯಿಯವರನ್ನು ಸಂರಕ್ಷಿಸುವದಂತೂ ದೂರೇ ಉಳಿಯಿತು. ಇನ್ನುಳಿದವರು ಸೀತಮ್ಮ-ಕಮಲಾಬಾಯಿಯರು! ಅವರೂ ಹೊರಗಿನ ಬಿಸಿಲನ್ನರಿಯದೆ, ಶ್ರೀಮಂತಿಕೆಯ ಸೌಖ್ಯವನ್ನು ಅನುಭೋಗಿಸಿದವರು; ಅಂದಮೇಲೆ ಅವರ ಉಪಜೀವನವು ಹ್ಯಾಗೆ ಸಾಗಬೇಕು? ಕಮಲಾಬಾಯಿಯ ಹಿಂದೊಂದೇ ಆಭರಣಗಳು

ಚಿನವಾಲಗಟ್ಟೆಯನ್ನು ಕಂಡವು. "ಕೂತು ಉಂಡರೆ ಕುಡಿಕೆ ಹೊನ್ನು ಸಾಲದು," ಎಂಬ ಗಾದೆಯಂತೆ ಬರಬರುತ್ತ ಇವರಿಗೆ ಹೊಟ್ಟೆಗಿಲ್ಲದಂತಾಗಿ ಒಂದೊದು ಎರಡೆರಡು ಉಪವಾಸಗಳಾಗತೊಡಗಿದವು. ಇಷ್ಟಾದರೂ ಸೂಜ್ಞಳಾದ ಕಮಲಾಬಾಯಿಯು ತವರುಮನೆಯ ಸುಖವನ್ನು ಕನಸು ಮನಸುಗಳಲ್ಲಿಯೂ ನೆನಿಸಲಿಲ್ಲ; ಮತ್ತು ತಂದೆಗೆ ತನ್ನ ದುಃಖವನ್ನು ತಿಳಿಸಲಿಲ್ಲ. ಎಂದಿನಂತೆ ರಂಗರಾಯರು ಒಮ್ಮೆ ಸಹಜವಾಗಿ ಕಮಲಾಬಾಯಿಯ ಭೆಟ್ಟಿಗೆ ಬಂದರು. ಮಗಳು ಹೊಟ್ಟೆಗಿಲ್ಲದೆ ಬಳಲುವದನ್ನು ನೋಡಿ, ಅವರಿಗೆ ಅತಿಶಯ ಕಸವಿಸಿಯಾಯಿತು. ಆಗ ಅವರು ಮಗಳಿಗೆ:— "ತಂಗೀ, ಈ ನಿನ್ನ ಅತ್ತೆಯ ಮನೆಯಲ್ಲಿ ಯಾವ ಸೌಖ್ಯವನ್ನು ಸುರಿದುಕೊಳ್ಳುವೆಯವ್ವಾ! ಪತಿಯ ಸುಖವನ್ನಂತೂ ನೀನು ಪಡೆದೇಬಂದಿಲ್ಲ. ಇಲ್ಲಿ ಅನ್ನ-ಅರಿವೆಗಳಿಲ್ಲದೆ ಬಳಲುವದಕ್ಕಿಂತ ನಮ್ಮಲ್ಲಿಗೆ ಬಂದು ಬಿಡು" ಎಂದು ಅನ್ನಲು, ಅದಕ್ಕೆ ಕಮಲಾಬಾಯಿಯು:—ಅಪ್ಪಾ! ನನ್ನ ಮನಸ್ಸನ್ನು ಪರೀಕ್ಷಿಸುವಿಯೇನು? ಇಲ್ಲಿಯವರೆಗೆ ಶ್ರೀಮಂತಿಕೆಯು ಇದ್ದಾಗ್ಗೆ ಸುಖವನ್ನು ಭೋಗಿಸಿ, ದೈವವಶಾತ್ ಈಗ ಬಡತನ ಬಂದಿರಲು, ತಾಯಿಗೆ ಸಮಾನರಾದ ಅತ್ತೆಯವರನ್ನೂ, ಸಹೋದರರ ಸಮಾನರಾದ ಮೈದುನರನ್ನೂ ಬಡತನದಲ್ಲಿ ಬಿಟ್ಟು ನಾನೊಬ್ಬಳೇ ಸುಖಕ್ಕೆ ಲುಬ್ಧಳಾಗಿ ಎಂದಿಗೂ ಬರಲಾರೆನು; ಇಷ್ಟಾಗಿ ಅತ್ತೆಯ ಮನೆಯಲ್ಲಿ ಎಷ್ಟು ಕಷ್ಟಗಳನ್ನನುಭವಿಸಿದರೂ ಅದು ನನಗೆ ಶ್ರೇಯಸ್ಕರವೇ ಸರಿ; ಎಂದು ಸ್ಪಷ್ಟವಾಗಿ ಹೇಳಿಬಿಟ್ಟಳು. ಮಗಳ ಈ ಅಮೃತದಂಥ ಮಾತನ್ನು ಕೇಳಿ, ಗುಣಲುಬ್ಧರಾದ ರಂಗರಾಯರು ಪರಮ ಹರ್ಷಿತರಾದರು. ಪ್ರಿಯಪುತ್ರಿಯ ಒಂದೊಂದೇ ಸದ್ಗುಣಗಳನ್ನು ಸ್ಮರಿಸುತ್ತ ತಮ್ಮ ಊರಿಗೆ ಹೋಗಿ, ಆ ಮೇಲೆ ಇವರೆಲ್ಲರ ಖರ್ಚಿಗೆ ಬೇಕಾಗುವಷ್ಟು ರೂಪಾಯಿಗಳನ್ನು ಆಗಾಗ್ಗೆ ಕಳಿಸಹತ್ತಿದರು.

ಇದೂ ಕೂಡಾ ವಿನಾಯಕರಾಯನಿಗೆ ಸರಿಬಾರದೆ ಅಪ್ರತ್ಯಕ್ಷರೀತಿಯಿಂದ ಆ ತಾಯಿಮಕ್ಕಳಿಗೆ ತೊಂದರೆಯನ್ನು ಕೊಡುತ್ತಲೇ ಇದ್ದನು. ಮುಂದೆ ಕೆಲವು ದಿವಸಗಳಲ್ಲಿ ಯಾರಿಂದಲೋ ಸಾವಿರ ರೂಪಾಯಿಗಳು ಮನಿಆರ್ಡರಾಗಿ ಬಂದಿವೆಯೆಂಬಸುದ್ದಿಯನ್ನು ಅಂಚೆಯವನಿಂದ ತಿಳಿದುಕೊಂಡು ಸುಳ್ಳುಪತ್ರದ ಆಧಾರದ ಮೇಲಿಂದ ೯೭೫ ರೂಪಾಯಿಗಳನ್ನೂ, ೨೫ ರೂಪಾಯಿಗಳ ಬದಲು ೫೦೦ ರೂಪಾಯಿಯ ಬೆಲೆಯುಳ್ಳ ಕಂಠಿಯ ಹಾರ

ವನನ್ನು ತಕ್ಕೊಂಡು ಹೋದನೆಂಬದನ್ನು ನಮ್ಮ ವಾಚಕರು ಬಲ್ಲರು. ಅಂತೂ ಅಣ್ಣಾಜಿರಾವ ಡಾಯರೆಕ್ಟರರು ಪರಂಧಾಮಕ್ಕೆ ತೆರಳಿದ ಬಳಿಕ ಈ ವರೆಗೆ ಅಂದರೆ ಹದಿನಾಲ್ಕು ವರ್ಷಗಳಲ್ಲಿ ಆ ತಾಯಿಮಕ್ಕಳು ಸೋಸಬಾರದ ಕಷ್ಟನಷ್ಟಗಳನ್ನು ಸೋಸುತ್ತಿದ್ದರು.

† † † † †

ಈ ದಿನ ಮೂರು ಘಂಟೆಯ ಸಮಯಕ್ಕೆ ವಿನಾಯಕರಾಯರು ತಮ್ಮ ಮಹಡಿಯ ಮೇಲಿನ ಸುಂದರವಾದ ದಿವಾಣಖಾನೆಯಲ್ಲಿ ಏನನ್ನೋ ಆಲೋಚಿಸುತ್ತ ಮಲಗಿಕೊಂಡಿದ್ದರು. ಬಾಗಿಲದ ಫಡಕುಗಳು ಸ್ವಲ್ಪ ಮುಚ್ಚಿದ್ದವು. ಎದುರಿಗಿನ ಖೋಲಿಯಲ್ಲಿ ಇಬ್ಬರು ಕಾರಕೂನರು ಜಮಾಖರ್ಚಿನ ಬರವಣಿಗೆಯಲ್ಲಿ ಮಗ್ನರಾಗಿ ಹೋಗಿದ್ದರು. ಮಲಗಿಕೊಂಡಿದ್ದ ವಿನಾಯಕರಾಯರು ಯೋಚನೆಯ ಭರದಲ್ಲಿ ಒಮ್ಮೆಲೇ ಎದ್ದು ಕುಳಿತು, ಆತ್ಮಗತವಾಗಿ:—ಯಾವ ಹಂಚಿಕೆಯಿಂದ ಇವರನ್ನು ಮುರಿಯಲಿ? ಮಾಡಬಾರದ ಕೃತಿಗಳನ್ನು ಇಲ್ಲಿಯವರೆಗೆ ಮಾಡಿದೆನು. ಆದರಿಂದ ಇವರ ಅವನತಿಯಾಗದೆ ಉನ್ನತಿಯೇ ಆಗುವದಲ್ಲಾ! ಮುರಲಿಯು ವಿದ್ಯೆ ಕಲಿಯಬಾರದೆಂದು ಶಾಲೆಯ ಫೀ-ಪುಸ್ತಕ ಕೊಡುವದನ್ನು ಬಂದು ಮಾಡಿದೆನು; ಮತ್ತು ಪರೀಕ್ಷೆಯ ಹೊತ್ತಿಗೆ ತಿನ್ನಲಿಕ್ಕೆ ಅನ್ನ ಸಹ ಸಿಗದಂತೆ ಮಾಡಿದೆನು; ಆದರೆ, ಆ ಕೊರತೆಗಳೇ ಅವನನ್ನು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಒಂದನೆಯ ನಂಬರ ಪಾಸ ಮಾಡಿಸಿ, ಬಂಗಾರದ ಪದಕವನ್ನು ಇನಾಮಾಗಿ ಕೊಡಿಸಬೇಕೇ! ಹೊಟ್ಟೆಗಿಲ್ಲದೆ ಇನ್ನಾದರೂ ಕಲಿಯುವದನ್ನು ಬಿಟ್ಟಾನೆಂದು ಮಾಡಿದರೆ, ಆ ರಂಗರಾಯನೊಬ್ಬನು ವಿಧಿಯಾಗಿರುವನು. ಬೇಡಿದಾಗ್ಗೆ ರೂಪಾಯಿ ಕಳಿಸುವದಲ್ಲದೆ, ಮೇಲೆ ಮಗಳಿಗೆ ದಾಗೀನೆಗಳನ್ನು ಕೊಟ್ಟು ಹೋಗುವನು. ಇಷ್ಟೆಲ್ಲ ಕಾರಭಾರ ಮಾಡಲಿಕ್ಕೆ ಅವನಿಗೆ ಯಾರು ಹೇಳಿದರು? ಕೊಡಲಿ, ಇನ್ನು ಮೇಲೆ ಎಷ್ಟು ರೂಪಾಯಿ ಕೊಡುತ್ತಾನೋ ನೋಡೋಣ. ಅವನ ಹಲ್ಲನ್ನೇ ಮುರಿಯುವೆನು. ನಾನು ಏನು ಮಾಡಿದರೂ ಮುದುಕಿಯು ಜೀವದಿಂದ ಇರುವದರೊಳಗಾಗಿಯೇ ಮಾಡಬೇಕು, ಅಂದರೆ ದಕ್ಕುವದು. ಇಂದೇ ಆ ಮುದುಕಿಯು ಬಿದ್ದು ಹೋದರೆ, ನಾಳೆಯೇ ಈ ಮನೆಯಲ್ಲಿ ನಡುವೆ ತಟ್ಟಿಯನ್ನು ಕಟ್ಟುವ ಪ್ರಸಂಗವು ಬಂದಿತೆಂದೇ ತಿಳಿಯಬೇಕು; ಆದರೆ, ನಾನು ಮಾತ್ರ ಜೀವದಿಂದಿರುವವರೆಗೆ

ಈ ಮನೆಯಲ್ಲಿ ಪಾಲು ಮಾಡಗೊಡಲಿಕ್ಕಿಲ್ಲ. ಎಂಥ ನೀಚ ಕೆಲಸವನ್ನಾದರೂ ಮಾಡಿ, ನನ್ನ ಸುಖಕ್ಕೆ ಕಂಟಕರಂತಿದ್ದ ಆ ಇಬ್ಬರು ತಮ್ಮಂದಿರನ್ನು ಮಣ್ಣುಪಾಲು ಮಾಡಲೇಬೇಕು; ಅಂದರೇ ಈ ಐಶ್ವರ್ಯವು ನನಗೆ ದಕ್ಕುವದು.

ಇನ್ನೊಂದು ಅಂಜಿಕೆಯು ನನ್ನನ್ನು ಬಾಧಿಸುತ್ತದಲ್ಲಾ! ಸಾವಿರ ರೂಪಾಯಿಗಳನ್ನಂತೂ ಸುಳ್ಳು ಹೇಳಿ ತೆಗೆದುಕೊಂಡು ಬಂದೆನು; ಆದರೆ, ಆ ರೂಪಾಯಿಗಳನ್ನು ಮುರಲಿಗೆ ಯಾರು ಕಳಿಸಿರಬಹುದು? ರಂಗರಾಯನಂತೂ ಕಳಿಸಿಲ್ಲ. ಇನ್ನು ಹಿಂದಕ್ಕೆ ಓಡಿಹೋದ ರಜನೀಕಾಂತನು ಕಳಿಸಿರಬಹುದೇನು? ಯಾರಿಗೆ ಗೊತ್ತು! ಅವನು ಬಹು ಜಾಣನು. ವೇಷಾಂತರದಿಂದ ಇಲ್ಲಿಯೇ ಸಮೀಪದಲ್ಲಿ ಯಾವದಾದರೊಂದು ಶಹರದೊಳಗೆ ನೌಕರಿಯಮೇಲಿದ್ದು, ನನ್ನ ಮೇಲಿನ ಸೇಡು ತೀರಿಸಿಕೊಳ್ಳುವದಕ್ಕಾಗಿಯೇ ಇಷ್ಟೆಲ್ಲ ತಂತ್ರವನ್ನು ಹಿಡಿದ್ದರೆ? ನನ್ನ ಅವತಾರವೇ ಮುಗಿದಂತಾಯಿತು! ಈಗಿನ ಪೋಲೀಸರೇನು? ತಪ್ಪು ಕಂಡರೆ ತಂದೆಯನ್ನು ಕೂಡಾ ನೋಡುವವರಲ್ಲ; ಆದರೆ ಸುದೈವದಿಂದ ನಮ್ಮ ಕುಳಿಂದಸ್ವಾಮಿಯಂಥವರ ನೆರವು ನನಗೆ ಸಿಕ್ಕಿರುವದು. ಅವರ ಸಹಾಯದಿಂದ ಬೇಕಾದದ್ದನ್ನು ಮಾಡಿ, ದಕ್ಕಿಸಿಕೊಳ್ಳಬಹುದು. ಎಡತಾಕಲಿ, ಆ ಮುರಲಿಯು ರೂಪಾಯಿ ಕೊಟ್ಟು ಈಗ ಮೂರುದಿವಸ ಎಡತಾಕಿದಂತೆ ಇನ್ನಾದರೂ ಎಡತಾಕಲಿ; ನಾನಂತೂ ಆ ಕಂಠಿಯ ಹಾರವನ್ನು ಕೊಡುವದಿಲ್ಲ, ಎಂದು ನುಡಿಯುತ್ತಿರುವಷ್ಟರಲ್ಲಿ ಹೊರಗಿನಿಂದ ಯಾರೋ:—ಕುಳಿಂದ ಸ್ವಾಮಿಯಂಥವರ ಸಹಾಯವು ದುಡ್ಡಿಲ್ಲದೆ ದೊರೆಯಲಾರದು, ಎಂದು ಗಟ್ಟಿಯಾಗಿ ನುಡಿದರು. ವಿನಾಯಕರಾಯನು ಬೆಚ್ಚಿಬಿದ್ದನು; ಗಾಬರಿಗೊಂಡು ಎದ್ದು ನೋಡಬೇಕೆನ್ನುವಷ್ಟರಲ್ಲಿ ಹವಾಲದಾರ ಸಾಹೇಬರು ನಗುತ್ತ ಒಳಗೆ ಬಂದರು. ವಿನಾಯಕರಾಯನು ಉತ್ಸುಕತೆಯಿಂದ:—ಹವಾಲದಾರ ಸಾಹೇಬ, ನೀವು ಹೊರಗೆ ಬಂದು ನಿಂತು, ಬಹಳ ಹೊತ್ತಾಯಿತೇನು? ನಾನಾಡಿಕೊಂಡ ಎಲ್ಲ ಮಾತುಗಳನ್ನೂ ನೀವು ಕೇಳಿರಬಹುದಲ್ಲವೆ?

ಹ:—ನಾನು ಬಂದು ನಿಂತು ಸ್ವಲ್ಪ ಹೊತ್ತಾದರೂ, ನಿಮ್ಮ ಎಲ್ಲ ಗುಟ್ಟಿನ ಮಾತುಗಳನ್ನು ಅಕ್ಷರಶಃ ಕೇಳಿಕೊಂಡೆನು. ಮತ್ತೇನು?

ವಿ:—ಕೇಳಿದರೂ ಚಿಂತೆಯಿಲ್ಲ. ಹವಾಲದಾರರೇ, ಮೊನ್ನೆ ರೂಪಾಯಿ

ತರುವ ದಿವಸವೇ ನಿಮಗೆ ಎಲ್ಲ ಸಂಗತಿಯನ್ನು ತಿಳಿಸಬೇಕೆಂದು ಮಾಡಿದ್ದೆನು; ಆದರೆ ನಿಮ್ಮ ಸಂಗಡ ಮತ್ತೊಬ್ಬ ಪೋಲೀಸನಿದ್ದದರಿಂದ ತಿಳಿಸಲಿಲ್ಲ. ಈಗ ಅನಾಯಾಸವಾಗಿ ತಿಳಿಯಿತಲ್ಲಾ. ಈ ಸುದ್ದಿಯನ್ನು ಮಾತ್ರ ಮಂದಿಯ ಮುಂದೆ ತೆಗೆಯಬೇಡಿರಿ.

ಹ:—ಅದರೊಳಗಿನ ಐದುನೂರು ರೂಪಾಯಿಗಳನ್ನು ಕೊಟ್ಟರೆ, ಮಂದಿಯ ಮುಂದೆ ನಾನೇಕೆ ಈ ಸುದ್ದಿಯನ್ನೆತ್ತಲಿ?

ವಿ:—ಆಹಾ! ದುಂಡಂಕಿಗಳನ್ನೇ ಹೇಳಿದಿರಲ್ಲಾ? ಇಷ್ಟು ಸಣ್ಣ ಕೆಲಸಕ್ಕೆ ಐದುನೂರು ರೂಪಾಯಿಗಳನ್ನು ಯಾರು ಕೊಟ್ಟಾರು! ಒಂದುನೂರು ರೂಪಾಯಿ ಒಯ್ದು ಬಿಡಿರಿ. ನೀವು ನಮ್ಮವರೆಂದು ತಿಳಿದು ಇಷ್ಟು ರೂಪಾಯಿ ಕೊಡುತ್ತೇನೆ. ಇಲ್ಲದಿದ್ದರೆ..........

ಹ. (ಗಂಭೀರಸ್ವರದಿಂದ):—ಹೌದು, ನಾನಾದರೂ ಹಾಗೆ ತಿಳಿದೇ ಸುಮ್ಮನಿರುವೆನು. ಇಲ್ಲದಿದ್ದರೆ ನಿಮಗೆ ಇಷ್ಟೊತ್ತಿಗೆ ಬಿನ್‌ಬಾಡಿಗೆಯ ಮನೆಯನ್ನು ತೋರಿಸಿ ಬಿಡುತ್ತಿದ್ದೆನು, ಎಂದು ನುಡಿಯಲು, ವಿನಾಯಕರಾಯರ ದೇಹದಲ್ಲಿ ಒಮ್ಮಿಂದೊಮ್ಮೆ ಕಂಪನವು ಉತ್ಪನ್ನವಾಯಿತು; ಆದರೂ ಅದನ್ನು ತೋರಗೊಡದೆ, ಮುಗುಳುನಗೆಯಿಂದ:—ಇಂಥ ಬೆದರಿಕೆಯನ್ನು ಹಳ್ಳಿಯವರ ಮುಂದೆ ತೋರಿಸಿರಿ, ಎಂದು ಅಂದು, ಕಪಾಟದ ಕಪಾಟಿನೊಳಗಿಂದ ಒಂದು ನೂರು ರೂಪಾಯಿಯ ನೋಟನ್ನು ತೆಗೆದು, ಹವಾಲದಾರರ ಮುಂದೆ ಒಗೆದರು. ಇಲ್ಲಿಯವರೆಗಿದ್ದ ಹವಾಲದಾರರ ದರ್ಪಯುಕ್ತ ಮುಖವು ಈಗ ಮುಗುಳು ನಗೆಯಿಂದ ಕೂಡಿದ್ದರಲ್ಲಿ ಆಶ್ಚರ್ಯವೇನು? ಅವರು ನೋಟನ್ನು ಒಳಜೇಬಿನಲ್ಲಿಟ್ಟುಕೊಂಡು, ಒಳ್ಳೇ ಹಿತಚಿಂತಕರಂತೆ:—ನಿಮ್ಮಂತೆಯೇ ಆಗಲಿ; ಆದರೆ, ಸಾವುಕಾರರೇ, ಆ ಸುಳ್ಳುಪತ್ರವನ್ನು ಮಹಾದೇವಪ್ಪನವರ ಕೈಯಲ್ಲಿ ಕೊಟ್ಟು ಬಂದದ್ದು ಮುಂದೆ ಅನರ್ಥಕ್ಕೆ ಕಾರಣವಲ್ಲವೇ?

ವಿ:-ಸಹಿ ಸೂತ್ರಗಳಿಲ್ಲದ ಪತ್ರಕ್ಕೆ ಅಷ್ಟೊಂದು ಹೆದರುವ ಕಾರಣವಿಲ್ಲ.

ಮುಂದೆ ಕೆಲ ಹೊತ್ತಿನವರೆಗೆ ಆ ಸುದ್ದಿ-ಈ ಸುದ್ದಿ ಮಾತಾಡಿದ ಮೇಲೆ ಹವಾಲದಾರಸಾಹೇಬರು ಹೊರಟರು. ವಿನಾಯಕರಾಯರು ಬಾಗಿಲವರೆಗೆ ಬಂದು:—ಹವಾಲದಾರಸಾಹೇಬರೇ, ನಾನು ಹೇಳಿದ್ದು ಲಕ್ಷದಲ್ಲಿರಲಿ. ಈ ಬಗ್ಗೆ ಎರಡನೆಯವರ ಮುಂದೆ ಚಕಾರಶಬ್ದ ಕೂಡಾ

ತೆಗೆಯಬೇಡಿರಿ.

ಹ:—ಆ ಸುದ್ದಿಯನ್ನು ನಾನು ಹೇಳುವದಿಲ್ಲ. ಈ ರೂಪಾಯಿ ಕೊಟ್ಟ ಸುದ್ದಿಯನ್ನು ನೀವೂ ಹೇಳಬೇಡಿರಿ. ಆಯಿತೋ ಇಲ್ಲೋ? ಎಂದು ಹೇಳಿ, ಬಡಿಗೆಯನ್ನು ಬೀಸುತ್ತ ಹಿಗ್ಗಿ ಸಂತೋಷದಿಂದ ಮನೆಯ ದಾರೀ ಹಿಡಿದರು.

ವಿನಾಯಕರಾಯರು ಪೀಡೆಯು ತೊಲಗಿ ಹೋಯಿತೆಂದು ಆನಂದ ದಿಂದ ದೇವರನ್ನು ಕೊಂಡಾಡುತ್ತ ಅಡಿಗೆಯ ಮನೆಗೆ ಬರುವಷ್ಟರಲ್ಲಿ ಚಹಾ ಸಿದ್ಧವಾಗಿತ್ತು. ರಾಯರು ಚಹಾಪಾನಕ್ಕೆ ಕುಳಿತರು. ಕೆಲ ಹೊತ್ತಿನ ಮೇಲೆ ಮುರಲೀಧರನು ಕಂಠಿಯ ಹಾರವನ್ನು ಇಸಕೊಳ್ಳುವದಕ್ಕಾಗಿ ಬಂದನು. ಆಗ ಅವರು ತಮ್ಮನನ್ನು ನೋಡಿ, ಫಲಾಹಾರಕ್ಕೆ ಕರೆ ಯದೆ:—ಮೇಲೆ ಕಾರಕೂನನ ಕಡೆಯಿಂದ ನಾಲ್ಕು ಆಣೆ ಇಸಕೊಂಡು ಪೇಟೆಗೆ ಹೋಗಿ, ಕಾಯಿಪಲ್ಲೆಗಳನ್ನು ತೆಗೆದುಕೊಂಡು ಬಾ ಹೋಗು. ಲಗು ಹೋಗು. ಸಂಜೆಗೆ ಏನೂ ಇಲ್ಲ; ಎಂದು ಹೇಳಿ, ಓಡಿಸಿಬಿಟ್ಟರು.

ಮುರಲೀಧರನು ಫಲಾಹಾರಕ್ಕೆ ಕರೆಯಲಿಲ್ಲೆಂದು ವಿಷಾದ ಪಡದೆ, ಇಂದು ಅಣ್ಣನು ತನ್ನನ್ನು ಬಂದಕೂಡಲೆ ದಿನದಂತೆ ತಿರಸ್ಕರಿಸದೆ, ಒಳ್ಳೆಯ ರೀತಿಯಿಂದ ಮಾತಾಡಿದನು; ಎಂದು ಹಿಗ್ಗುತ್ತ ಪೇಟೆಗೆ ಹೋಗಿ, ಕಾಯಿ ಪಲ್ಲೆಗಳನ್ನು ತಂದು, ನೀಲಗಂಗಾಬಾಯಿಯ ಮುಂದಿರಿಸಿದನು. ನೀಲ ಗಂಗಾಬಾಯಿಯು ದರ್ಪಯುಕ್ತ ಸ್ವರದಿಂದ ಪ್ರತಿಯೊಂದರ ಬೆಲೆಯನ್ನು ಕೇಳಹತ್ತಿದಳು. ಮುರಲಿಯು ಮ್ಯಾಜಿಸ್ಟ್ರೇಟರ ಮುಂದೆ ಆರೋಪಿಯು ಜವಾಬು ಕೊಡುವಂತೆ, ಅತ್ತಿಗೆಯ ಮುಂದೆ ಕೊಟ್ಟ ಬೆಲೆಯನ್ನು ಹೇಳಿ, ಮಹಡಿಯ ಮೇಲೆ ತಾಂಬೂಲ ಮೆಲ್ಲುತ್ತ ಕುಳಿತಿದ್ದ ವಿನಾಯಕರಾಯರ ಬಳಿಗೆ ಬಂದನು. ವಿನಾಯಕರಾಯರು ಮುರಲಿಯನ್ನು ನೋಡಿಯೂ ನೋಡದವರಂತೆ ನಟಿಸುತ್ತಿದ್ದರೂ ಮುರಲಿಯು ಬಿಡದೆ:—ಅಣ್ಣಾ, ಅವ್ವನು ಕಂಠಿಯ ಹಾರವನ್ನು ಇಸಕೊಂಡು ಬರಲಿಕ್ಕೆ ಕಳಿಸಿರುವಳು, ಎಂದು ಅಂಜಂಜುತ್ತ ಕೇಳಿದನು.

ವಿನಾಯಕರಾಯರು ತಿರಸ್ಕಾರ ಮುದ್ರೆಯಿಂದ:—ನಿಮ್ಮ ಕಂಠಿಯ ಹಾರವನ್ನೇನು ನಾನು ನುಂಗುವದಿಲ್ಲ, ಹೋಗು. ಮತ್ತೆ ಯಾವಾಗಾ ದರೂ ಬಂದು ಒಯ್ದರೆ ಆಗುವದಿಲ್ಲೇನು? ದುಗ್ಗಾಣಿಯ ಕಿಮ್ಮತ್ತಿನ

ಹಾರವನ್ನು ಒಯ್ಯಲಿಕ್ಕೆ ಇಷ್ಟೇಕೆ ಅವಸರವು?

ಮುರಲೀಧರ:—ರೂಪಾಯಿ ಕೊಟ್ಟು ಮೂರು ದಿವಸಗಳಾದರೂ ಯಾಕೆ ಕೊಡಬಾರದೆಂದು ಅತ್ತಿಗೆಯೂ ಸಿಟ್ಟು ಮಾಡುತ್ತಾಳೆ,

ವಿನಾಯಕರಾಯ:—ಹೀಗೇನು? ಮುರಲೀ, ಒಬ್ಬರ ಅಡಚಣಿಯನ್ನು ಮತ್ತೊಬ್ಬರು ಕೇಳಬೇಕಷ್ಟೇ? ಈಗ ನನಗೆ ಹಣದ ಕೊರತೆಯು ಬಹಳ ಇರುವದು. ತೋಟಾಚಾರ್ಯರಿಗೆ ಸಾವಿರ ರೂಪಾಯಿಗಳನ್ನು ಸಾಲವಾಗಿ ಕೊಡಿರೆಂದು ಕೇಳಿರುವೆನು. ಅವರು ಅಡವು ಇಡದೆ ಕೊಡುವದಿಲ್ಲೆಂದು ಅನ್ನುತ್ತಾರೆ; ಅಂದ ಮೇಲೆ ನಮ್ಮಲ್ಲಿಯ ಇದ್ದಬಿದ್ದ ದಾಗೀನೆಗಳನ್ನೂ, ನಿಮ್ಮ ಆ ಹಾರವನ್ನೂ ಅವರಲ್ಲಿ ಅಡವು ಇಡಬೇಕಾಗುತ್ತದೆ. ಈ ಮಾತು ನಿನಗೆ ಸುಳ್ಳು ಕಂಡರೆ, ಈಗ ನನ್ನ ಸಂಗಡ ಆಚಾರ್ಯರಲ್ಲಿಗೆ ನಡೆ. ನಿನ್ನ ಸಮಕ್ಷಮವಾಗಿಯೇ ಎಲ್ಲ ಕೆಲಸವಾಗಲಿ, ಎಂದು ನುಡಿದು, ಅಂಗಿ-ರುಮಾಲುಗಳನ್ನು ಹಾಕಿಕೊಂಡು, ಒಮ್ಮೆಲೆ ಹೊರಬಿದ್ದರು. ಮುರಲೀಧರನು ಮುಂದೆ ಮಾಡುವದೇನು? ವ್ಯಗ್ರಚಿತ್ತನಾಗಿ, ಅಣ್ಣನನ್ನು ಹಿಂಬಾಲಿಸಿ ನಡೆದನು.

ಕೆಲಹೊತ್ತಿನ ಮೇಲೆ ಮುರಲೀಧರನೊಬ್ಬನೇ ತಿರುಗಿ ಬಂದನು. ಅಡಿಗೆಯುವಳಿಗೆ ಸಂಜೆಯ ಸಾಹಿತ್ಯಗಳನ್ನು ಕೊಡುತ್ತಲಿದ್ದ ನೀಲಗಂಗಾಬಾಯಿಯು ಮುರಲಿಯನ್ನು ನೋಡಿ:—ಮುರಲೀ, ತೋಟಾಚಾರ್ಯರಲ್ಲಿಗೆ ನೀನೂ ಯಜಮಾನರೂ ಕೂಡಿ ರೂಪಾಯಿ ತರಲಿಕ್ಕೆ ಹೋಗಿದ್ದಿರಲ್ಲವೇ? ನಡುವೆ ನೀನೊಬ್ಬನೇ ಯಾಕೆ ಬಂದೆ?

ಮುರಲೀಧರ:—ಹೌದು. ರೂಪಾಯಿ ತರಲಿಕ್ಕೆ ಹೋಗಿದ್ದೆವು. ಆಚಾರ್ಯರು ಅಡವು ಇಡದೆ ರೂಪಾಯಿ ಕೊಡುವದಿಲ್ಲೆಂದು ಹೇಳಲು, ಅಣ್ಣನು ಅಲ್ಲಿಯೇ ಉಳಿದು, ನನ್ನನ್ನು ಕಂಠಿಯ ಹಾರವನ್ನು ತಕ್ಕೊಂಡು ಬಾ, ಎಂದು ಕಳಿಸಿದನು.

ನೀಲಗಂಗಾಬಾಯಿಯು:—ಅವರು ಯಾವಾಗ್ಗೆ ಬರುವರು?

ಮುರಲೀಧರ:—ನಾನು ಹಾರವನ್ನು ಒಯ್ದು ಕೊಟ್ಟ ಮೇಲೆ.

ನೀಲಗಂಗಾಬಾಯಿಯು:—ತಾವೇ ಇಲ್ಲಿಯವರೆಗೆ ಬಂದು ಒಯ್ದಿದ್ದರೆ ಆಗುತ್ತಿದ್ದಿಲ್ಲವೇನು? ಅಲ್ಲಿಯೇ ಕೂತುಕೊಂಡು ಅಧಿಕಾರ ನಡಿಸಿದರೆ ಯಾರು ಕೇಳಬೇಕು? ಅವರು ಬಂದ ಹೊರತು ನಾನು ಹಾರವನ್ನು ಕೊಡು

ವದಿಲ್ಲ, ಎಂದು ಆಧ್ಯತೆಯಿಂದ ಹೇಳಿದಳು. ಆದರೂ, ಮುರಲೀಧರನು ಬಿಡದೆ:—ಅವನಿಗೆ ಬರಲಿಕ್ಕೆ ಅನುಕೂಲವಿದ್ದರೆ ನಾನೇಕೆ ಬರುತ್ತಿದ್ದೆನು? ಏನನ್ನೋ ಬರೆಯುತ್ತ ಕುಳಿತದ್ದರಿಂದ ನನ್ನನ್ನು ಕಳಿಸಿದನು.

ನೀಲಗಂಗಾಬಾಯಿಯು:—ಅದಕ್ಕೆ ನಾನೇನು ಮಾಡಲಿ? ಅವರ ಹೊರತು ಎರಡನೆಯವರ ಕೈಯಲ್ಲಿ ನಾನು ಮುರುಕು ಸೂಜಿಯನ್ನು ಸಹ ಕೊಡುವದಿಲ್ಲ. ಬೇಕಾದರೆ ನೀನು ಅವರಿಗೆ ಇದರಂತೆಯೇ ಹೇಳು.

ಮುರಲೀಧರ:—ನಿಮಗೇ ಇಷ್ಟು ನಂಬಿಗೆಯಿಲ್ಲದಿದ್ದರೆ, ನನಗಾದರೂ ಈ ಪೇಚಾಟವೇತಕ್ಕೆ ಬೇಕು? ಅತ್ತಿಗೀ, ವಿಚಾರ ಮಾಡಿ ನೋಡು. ನೀನು ಹೇಳು ಅಂದಂತೆ ಹೇಳುತ್ತೇನೆ. ಕಡೆಗೆ ನೀನೇ ಸಿಟ್ಟು ಮಾಡಿಸಿಕೊಳ್ಳಬೇಕಾದೀತು. ಸಾಲದ ಎಲ್ಲ ರೂಪಾಯಿಗಳನ್ನು ಕೊಟ್ಟದ್ದರೂ ಸಹ ನಾನು ಆ ಹಾರವನ್ನು ಮನೆಗೆ ಒಯ್ಯುವದಿಲ್ಲ. ಇನ್ನು ಬರಿಗೈಯಿಂದ ಶೋಟಾಚಾರ್ಯರ ಮನೆಗೆ ಹೋಗುವದರಲ್ಲಿಯಾದರೂ ಏನು ಅರ್ಥವಿದೆ? ಎಡತಾಕುವ ಶ್ರಮವಾದರೂ ತಪ್ಪಿತು; ಎಂದು ನುಡಿದು, ಅಭಾವ ವೈರಾಗ್ಯವನ್ನು ತಾಳಿ ಮನೆಯ ಹಾದೀ ಹಿಡಿದನು. ಅಷ್ಟರಲ್ಲಿ ನೀಲಗಂಗಾಬಾಯಿಗೆ ಮತ್ತೆ ಏನು ತಿಳಿಯಿತೋ ಏನೋ, ಮುರಲೀಧರನನ್ನು ತಿರುಗಿ ಕರೆದು ಅವನ ಕೈಯಲ್ಲಿ ಕಂಠಿಯ ಹಾರವನ್ನು ಕೊಟ್ಟು ಕಳಿಸಿದಳು.

ಆ ಮೇಲೆ ತುಸ ಹೊತ್ತಿನೊಳಗೆ ವಿನಾಯಕರಾಯರು ಸಾವಿರ ರೂಪಾಯಿಯ ಚೀಲವನ್ನು ಹೆಗಲಮೇಲೆ ಹೊತ್ತುಕೊಂಡು, ತೇಕುತ್ತ ಮನೆಗೆ ಬಂದರು. ಆಗ ನೀಲಗಂಗಾಬಾಯಿಯು ನಡುಮನೆಯಲ್ಲಿ ಕೂಸಿನೊಂದಿಗೆ ಆಟವಾಡುತ್ತ ಕುಳಿತಿದ್ದಳು. ಶ್ರಮವನ್ನರಿಯದ ವಿನಾಯಕರಾಯರಿಗೆ ಇಷ್ಟರಿಂದಲೇ ಸಾಕು ಸಾಕಾಗಿ ಹೋಗಿತ್ತು. ಅವರು ಬೇಸರದಿಂದ ರೂಪಾಯಿಯ ಚೀಲವನ್ನು ನೀಲಗಂಗಾಬಾಯಿಯ ಮುಂದೆ ಒಗೆದು:— ಬರಲಿ, ಇನ್ನುಮೇಲೆ ಆ ಹೊಲಿಯನು-ನಮ್ಮ ಮನೆಗಾದರೂ ಬರಲಿ, ಎದೆಗೆ ಒದೆಯುವೆನು. ರೂಪಾಯಿ ಹೊತ್ತುಕೊಂಡು ಬಂದಾನೆಂದು ತಿಳಿದು, ನೆವ ಹೇಳಿ ಕರೆದುಕೊಂಡು ಹೋದರೆ, ಈಗ ಬರುತ್ತೇನೆಂದು ಹೇಳಿ ಹೋದವನು ತಿರುಗಿ ಬರಬಾರದೇ? ಕಾಣಲಿ, ಅವನು ಹಿಂದಕ್ಕೆ ಕೊಟ್ಟ ರೂಪಾಯಿಗಳನ್ನಂತೂ ಜಮೆ ಬರೆದುಕೊಂಡೇ ಇಲ್ಲ! ಅಂದಮೇಲೆ ಏನು ಮಾಡುವನು? ಈ ಠಕ್ಕರಿಗೆ ಇದೇ ಉಪಾಯವು, ಎಂದು ನುಡಿದು,

ದೀರ್ಘಶ್ವಾಸದೊಡನೆ ಅಲ್ಲಿಯೇ ಮಣೆಯ ಮೇಲೆ ಕುಳಿತುಕೊಂಡರು.

ಇದೆಲ್ಲವನ್ನು ಕೇಳಿ ನೀಲಗಂಗಾಬಾಯಿಯು ಮುರಲಿಯು ತನ್ನನ್ನು ವಂಚಿಸಿ ಹಾರವನ್ನು ಒಯ್ದನೆಂದು ಗಾಬರಿಯಾದಳು. ಆಕೆಯು ಎದೆಯು ಹ್ವಾಥಹತ್ತಿದ್ದಲ್ಲದೆ ದೇಹವು ಜೋರೆಂದು ಬೆವತಿತು. ದಣಿದು ಕಂಗಾಲಾಗಿ ಬಂದವರ ಮುಂದೆ ಈ ಸಂಗತಿಯನ್ನು ಹೇಳಿದರೆ, ನನ್ನ ಪರಿಣಾಮವು ನಾಗವೆಂದು ತಿಳಿದು ಚಿಂತಿಸಹತ್ತಿದಳು; ಆದರೆ ಜಾತ್ಯಾ ತಂತ್ರಗಾರಳಾದ ಆವಳಿಗೆ ಈ ಸಮಯದಲ್ಲಿ ತಕ್ಕ ಹಂಚಿಕೆಯು ತೋಚದೆ ಇರಲಿಲ್ಲ. ನೋಡ ನೋಡುವಷ್ಟರಲ್ಲಿ ಅವಳ ನೇತ್ರಗಳು ಅಶ್ರುಗಳಿಂದ ಪರಿಪೂರ್ಣವಾದವು. ಇದನ್ನು ನೋಡಿ ವಿನಾಯಕರಾಯರು ಗಾಬರಿಯಿಂದ:—ಯಾಕೆ? ಸುಮ್ಮ ಸುಮ್ಮನೆ ಕಣ್ಣುಗಳಲ್ಲಿ ನೀರು ಬರಲಿಕ್ಕೆ ಕಾರಣವೇನು? ನಾನು ಬರುವ ಪೂರ್ವದಲ್ಲಿ ಇಂದಿರೆಯ ಕೂಡ ಆಟವಾಡುತಲಿದ್ದವಳು ಈಗ ಒಮ್ಮಿಂದೊಮ್ಮೆ ಅಳಹತ್ತಿದೆಯಲ್ಲಾ! ಏನು, ಆದದ್ದನ್ನು ಹೇಳಿಬಿಡು. ಕಾರಕೂನರೇನಾದರೂ ಅಂದರೇನು? ಎಂದು ಅಂತಃಕರಣದಿಂದ ಕೇಳಿದರು. ನೀಲಗಂಗಾಬಾಯಿಗೂ ಇಷ್ಟು ಕೇಳುವದೇ ಬೇಕಾಗಿತ್ತು. ಆಕೆಯು ದುಃಖಮಿಶ್ರಿತ ಕಂಪಿತಸ್ವರದಿಂದ:-ಉತ್ತರಕುಮಾರನಂತೆ ನೀವು ಬಾಯಿಂದ ಪೌರುಷದ ಮಾತುಗಳನ್ನಷ್ಟೇ ಆಡಲಿಕ್ಕೆ ಶೂರರು; ಕೈಯಿಂದ ಏನೇನೂ ಆಗುವಂತಿಲ್ಲ. ಹೆಂಡತಿಯನ್ನು ತಮ್ಮನು ಪಾಪದೃಷ್ಟಿಯಿಂದ ನೋಡಿದರೂ ಅಷ್ಟೇ, ಮೈಮೇಲೆ ನುಗ್ಗಿ ಕಂಠಿಯ ಹಾರವನ್ನು ಕಸಿದುಕೊಂಡು ಹೋದರೂ ಅಷ್ಟೇ, ಅದರ ಬಗ್ಗೆ ನಿಮಗೆ ಸ್ವಲ್ಪೂ ಸಿಟ್ಟು ಇಲ್ಲ. ತಿರಿದುಣ್ಣುವ ತಿರುಕನಿಗೂ ಸಹ ತನ್ನ ಹೆಂಡತಿಯ ಮರ್ಯಾದೆಯ ವಿಷಯವಾಗಿ ಅಭಿಮಾನವಿರುತ್ತದೆ ನಿಮಗೆಲ್ಲಿದೆ? ಕೂಡಿ ಇದ್ದಾಗಲೇ ಆ ನೀಚ ಮುರಲಿಯು ನನ್ನ ಮೇಲೆ ಕಣ್ಣು ಇಟ್ಟದ್ದು, ನಿಮಗೆ ಗೊತ್ತಿದ್ದರೂ ಮತ್ತೆ "ತಮ್ಮಾ-ತಮ್ಮಾ" ಎಂದು ಕರೆಯುತ್ತೀರಿ. ನಾನು ನಿಮಗೆ ಅಷ್ಟೊಂದು ಬೇಸರವಾಗಿದ್ದರೆ, ಅಪ್ಪಣೆಕೊಟ್ಟು ಬಿಡಿರಿ. ಎಲ್ಲಿಯಾದರೂ ತಿರಿದುಂಡು, ಮರ್ಯಾದೆಯಿಂದಿರುವೆನು. ಆ ಮೇಲೆ ತಮ್ಮಂದಿರನ್ನು ಕೂಡಿಕೊಂಡು ಇರಲಿಕ್ಕೆ ನಿಮಗೆ ಅನುಕೂಲವಾಗುವದು, ಎಂದು ನುಡಿದು, ನಿಜವಾದ ದುಃಖಿತರಂತೆ ದೊಡ್ಡ ಧ್ವನಿ ತೆಗೆದು ಅಳಹತ್ತಿದಳು!

ನೀಲಗಂಗಾಬಾಯಿಯು ಈ ಕೃತ್ರಿಮ ದುಃಖವನ್ನು ನೋಡಿ,

ವಿನಾಯಕರಾಯರಿಗೆ ಪರಮಾವಧಿ ಸಿಟ್ಟು ಬಂದಿತು. ನೋಡನೋಡು ವಷ್ಟರಲ್ಲಿ ಅವರ ಕಣ್ಣುಗಳು ಕೆಂಡದಂತಾಗಿ, ಕೆಳದುಟಿಯು ಕಂಪಿಸ ಹತ್ತಿತು. ಕೋಪದ ಭರದಲ್ಲಿ ಕೆಳದುಟಿಯನ್ನು ಕಚ್ಚುತ್ತ:—ಏನಂದಿ? ಆ ದುಷ್ಟ ಮುರಲಿಯು ನಿನ್ನ ಮೈಮೇಲೆ ನುಗ್ಗಿ, ಹಾರವನ್ನು ಕಸಿದು ಕೊಂಡು ಹೋದನೇ! ಹೋಗಲಿ. ಆಗ್ಗೆ ನೀನೇನು ಮಾಡಿಕೊಂಡಿದ್ದೆ? ಕಾರಕೂನರು ಸತ್ತಿದ್ದರೇ? ಅವರ ಕಡೆಯಿಂದ ಆ ಹೊಲೆಯನನ್ನು ಕಂಬಕ್ಕೆ ಕಟ್ಟಿಸಿ, ಚನ್ನಾಗಿ ತಳಿಸಬೇಕಾಗಿತ್ತು; ಇಷ್ಟೂ ತಿಳಿಯದೆ ಸುಮ್ಮನೆ ಹಾರ ವನ್ನು ಕೊಟ್ಟು ಅಳುತ್ತ ಕುಳಿತರೆ, ನಾನೇನು ಮಾಡಲಿ? ಹೋಗು, ಇಲ್ಲಿ ನಿಲ್ಲಬೇಡ. ಆ ಹಾರವನ್ನು ತೆಗೆದುಕೊಂಡು ಬಂದೇ ನಮ್ಮ ಮನೆಯೊಳ ಗಿರು; ಎಂದು ಗದ್ದರಿಸಿದರು. ಇದನ್ನು ಕೇಳಿ ನೀಲಗಂಗಾಬಾಯಿಯು ದೈವವನ್ನು ಹಳಿದುಕೊಳ್ಳುತ್ತ:—ನಾನು ಕೈ ಎತ್ತಿ ಹಾರವನ್ನು ಕೊಟ್ಟಿಲ್ಲ. ಕೇಳಿರಿ, ಈ ನಂಜವ್ವ(ಅಡಿಗೆಯವಳು)ನೂ ಇದ್ದಳು. ಕಾರಕೂನರು ಮೇಲೆ ಇದ್ದರು. ಆಗ್ಗೆ ಮುರಲಿಯು ಹೇಳದೆ ಕೇಳದೆ ಒಳಗೆ ಬಂದು, ಒಮ್ಮೆಲೆ ಮೈಮೇಲೆ ನುಗ್ಗಿದನು. ಮೊಲೆಕುಡಿಯುತಲಿದ್ದ ಇಂದಿರೆಯು ಅವನ ಗುದ್ದಾಟದಲ್ಲಿ ಕೈ ತಪ್ಪಿ ನೆಲಕ್ಕೆ ಬಿದ್ದಿತು. ನಾನು ಆ ಕೂಸನ್ನು ಎತ್ತಿಕೊಳ್ಳುವಷ್ಟರಲ್ಲಿ ಕೊರಳೊಳಗಿನ ಹಾರವನ್ನು ಕಸಿದುಕೊಂಡನು. ಅಷ್ಟರಲ್ಲಿಯೇ ನಂಜವ್ವನು ಅಡಿಗೆಯ ಕೋಣೆಯಿಂದ ಹೊರಗೆ ಬರಲು, ಓಡಿಹೋದನು. ಇಲ್ಲದಿದ್ದರೆ ಆ ನೀಚನು ನನಗೆ ಇನ್ನೂ ಏನೇನು ಮಾಡುತ್ತಿದ್ದನೋ ಏನೋ? ನಂಜವ್ವನು ಅವನನ್ನು ಹಿಡಿಯಲಿಕ್ಕೆ ಬಹಳ ಸಾಹಸಬಟ್ಟಳು; ಆದರೂ ಅವನು ಸಿಗಲಿಲ್ಲ. ಇದನ್ನು ಸಿಕ್ಕವರ ಮುಂದೆ ಹೇಳುತ್ತ ಕುಳಿತರೆ, ನಮ್ಮ ಕಿಮ್ಮತ್ತೇ ಕಡಿಮೆಯೆಂದು ಸುಮ್ಮನಾದೆನು. ಇದರಲ್ಲಿ ನನ್ನ ತಪ್ಪು ಇದ್ದರೆ ಮತ್ತಿಷ್ಟು ಬೈಯಿರಿ; ಎಂದು ಹೇಳಿ, ಸಪ್ತಮ ಸ್ವರದಲ್ಲಿ ಅಳಹತ್ತಿದಳು. ಇದರಿಂದಂತೂ ವಿನಾಯಕರಾಯರು ಮುರಲೀ ಧರನ ಮೇಲೆ ಕಡುಕೋಪಗೊಂಡು, ಅವಡುಗಚ್ಚುತ್ತ:—ಎಲೇ ಮುರಲೀ! ನಾನಿಲ್ಲದ ವೇಳೆಯಲ್ಲಿ ಇಷ್ಟು ಘಾತುಕತನವನ್ನು ಮಾಡಿದೆಯಾ! ಒಂದು ವೇಳೆ ಆಗ ನಾನಿದ್ದರೆ, ನಿನ್ನನ್ನು ಹುಗಿಸಿ ಬಿಡುತ್ತಿದ್ದೆನು. ಆದರೂ ಚಿಂತೆ ಯಿಲ್ಲ. ಇನ್ನಾದರೂ ಈ ಸೇಡನ್ನು ತೀರಿಸಿಕೊಂಡೇ ಬಿಡುವೆನು. ನಾನು ಪಾರಾದೆನೆಂದು ನೀನು ತಿಳಿದಿರಬಹುದು. ಆದರೆ, ಈ ವಿನಾಯಕರಾಯರು

ತನ್ನ ಆ ದ್ವಿತೀಯ ಭಾರ್ಯೆಯ ಕೈಯಲ್ಲಿ ರಾಜ್ಯಸೂತ್ರಗಳನ್ನೊಪ್ಪಿಸಿ, ಶೃಂಗಾರ ಸಾಧನೆಯಲ್ಲಿ ಕಾಲಕಳೆಯಬೇಕಿತ್ತು. ಆನಂದೀಬಾಯಿಯು—ವೃದ್ಧಪತಿಯ ಮಮತೆಯ ಮಡದಿಯು-ತನ್ನ ಸಾಹಸಕ್ಕೆ ತಕ್ಕ ಫಲವನ್ನು ಹೊಂದಿ ರಾಜ್ಯಕಾರ ಭಾರವನ್ನು ಸಾಗಿಸುತ್ತ ವಿಲಾಸಪ್ರಿಯನಾದ ಪತಿಯ ಮನಸ್ತುಷ್ಟಿಗೆ ಯತ್ನಿಸ ಬೇಕಿತ್ತು. ಕೃತಕೃತ್ಯನಾದ ರಘುನಾಥರಾಯನು ಸುಂದರಿಯೂ ತರುಣಿಯೂ ಆದ ಹೆಂಡತಿಯ ರಾಜ್ಯ ಪರಿಪಾಲನೆಯ ಕುಶಲತೆಯನ್ನು ಕೊಂಡಾಡುತ್ತ ವಿಲಾ ಸಮಗ್ನನಾಗಿ ಸಂತೋಷಸಾಗರದಲ್ಲಿ ಈಸಾಡಬೇಕಾಗಿತ್ತು; ಆದರೆ........

ನಿಯತಿಯು ಈ ಸತಿಪತಿಗಳ ಇಷ್ಟಾರ್ಥಪೂರ್ತಿಗೆ ಅನುಕೂಲಿಸಿರಲಿಲ್ಲ. ದುರ್ಭಾವನೆಯಿಂದ ಪ್ರೇರಿತರಾಗಿ ದುಷ್ಕೃತ್ಯವನ್ನಾಚರಿಸಿದ್ದ ಈ ದಂಪತಿಗಳ ವಿಷಯದಲ್ಲಿ ದೈವವು ದುರ್ಮುಖವಾಗಿತ್ತು. ಅದು ಈ ನೀಚದಂಪತಿಗಳ ವಿರುದ್ಧ ರಾಜ್ಯದ ಪ್ರಮುಖರನ್ನು ಹುರಿದುಂಬಿಸಿತು. ಅಂದಿನ ಮರಾಟಿಗರ ಮುಂದಾ ಳುಗಳು ರಾಘೋಬನಿಗೆ ರಾಜ್ಯವನ್ನು ದಕ್ಕಗೊಡಬಾರದೆಂದು ನಿರ್ಧರಿಸಿಕೊಂ ಡರು. ಒಮ್ಮನಸಿನಿಂದಲೂ ಜಾಣತನದಿಂದಲೂ ಟೊಂಕಕಟ್ಟಿ ರಘುನಾಥರಾ ಯನನ್ನು ಪಟ್ಟದಿಂದ ತಳ್ಳುವ ಕೆಲಸಕ್ಕೆ ತೊಡಗಿದರು. ಉಂಟಾದ ಎಡರು ಗಳಿಂದ ಭಯಗೊಳ್ಳದೆ, ಒದಗಿದ ಭಯಂಕರ ಪ್ರಸಂಗಗಳಿಗೆ ತಲೆಗೊಟ್ಟು, ಸಾವ ಧಾನತೆಯಿಂದ ನಡೆದು, ಕೈಗೊಂಡಕಾರ್ಯವನ್ನು ಕಡೆಗಾಣಿಸಿದರು. ರಾಮ ದಾಸಸ್ವಾಮಿಗಳಿಂದ ಉಪದೇಶಹೊಂದಿದ, ಶಿವಛತ್ರಪತಿಯಿಂದ ಪಾತಕಲಿತ ಮರಾಟಿಗರ ವಂಶಜರು ತಾವೆಂಬುದನ್ನು, ಅಂದು ಮರಾಟಿಗರಲ್ಲಿ ಉಂಟಾಗಿದ್ದ ದೇಶಾತ್ಮಬೋಧೆಯು ಈಗಲೂ ಮರಾಟಿಗರಲ್ಲಿ ವಾಸಿಸಿದೆಯೆಂಬುದನ್ನು ಜಗ ತ್ತಿನ ನಿದರ್ಶನಕ್ಕೆ ತಂದುಕೊಟ್ಟರು; ಹಾಗು ದುರ್ಜನರ ಆಸುರೀಯ ಮಹ ತ್ವಾಕಾಂಕ್ಷೆಯು ಕಡೆಗಾಣದ್ದು ಅನಿಷ್ಟಕರವೂ ಎಂಬುದನ್ನು ಆನಂದೀಬಾಯಿ ಹಾಗು ರಘುನಾಥರಾಯರ ಮನವರಿಕೆ ಮಾಡಿಕೊಟ್ಟರು.

ಅಂದು ಮರಾಟಿಗರ ಮುಂದಾಳುಗಳು ರಾಘೋಬನ ರಾಜ್ಯಕಾರಭಾರಕ್ಕೆ ಪ್ರತಿಕೂಲರಾಗದಿದ್ದರೆ? ಎಂಬದು ಗೌಣ ಪ್ರಶ್ನೆಯಾದರೂ, ಜಿಜ್ಞಾಸುಗಳಾದ ಕೆಲವರಲ್ಲಿ ಹುಟ್ಟುವದು ಸ್ವಾಭಾವಿಕವಾಗಿದೆ. ರಘುನಾಥರಾಯನು ಯಾವ ದಾರಿಯಿಂದಲೇ ನಡೆದಿರಲಿ, ಸಿಂಹಾಸನವನ್ನು ಸಮೀಪಿಸಿದ್ದನು;-ಆಕ್ರಮಿಸಿದ್ದನು. ಇವನು ಅಲ್ಲಿಯೇ ಸ್ಥಿರವಾಗಿ ಉಳಿದಿದ್ದರೆ, ಮರಾಟಿಗರ ರಾಜ್ಯಕ್ಕೆ ಭಯಂಕರ ಅಪ ಘಾತವು ಆಗುತ್ತಿತ್ತೆಂದು ನಿರ್ಧಾರದಿಂದ ಹೇಳಲಿಕ್ಕೆ ಬರುವಂತಿಲ್ಲ. ರಾಘೋ ಬನು ಪೇಶ್ವೆಯಾಗುತ್ತಲೆ ಮರಾಟಿಗರ ರಾಜ್ಯವು ಆಳಿಗಾಲ ಹೊಂದುವುದೆಂದು ಅನ್ನಲಿಕ್ಕೆ ಬರುವಂತಿತ್ತೆ? ರಾಘೋಬನು ತನ್ನ ಅಲ್ಪಕಾಲದ ಆಳಿಕೆಯಲ್ಲಿ ಕೇವಲ

ವಿಧ್ವಂಸಕ ಕಾರ್ಯಗಳನ್ನೇ ಮಾಡಿದನೆಂದು ಹೇಳಬಹುದೇ? ಮೇಲಾಗಿ ರಘುನಾಥರಾಯನು ಹೇಡಿಯಲ್ಲ ಮುತ್ಸದ್ದಿಯಲ್ಲದಿದ್ದರೂ ಅಳುಬುರುಕನಲ್ಲ. ದಕ್ಷಿಣದ ಮರಾಟಿಗರ ನಿಶಾನೆಯನ್ನು ವಾಯುವ್ಯದ ಸರಹದ್ದಿನಲ್ಲಿಯ ಅಟಕದಲ್ಲಿ ನಿಲ್ಲಿಸಿ ಬಂದ ಮಹಾ ರಥಿಯು. ಹೀಗಿರಲು ಮರಾಟಿಗರ ಮುಂದಾಳುಗಳು ರಾಘೋಬನ ರಾಜ್ಯಕಾರಭಾರವನ್ನು ಬಲವಾಗಿ ವಿರೋಧಿಸಿದ್ದೇಕೆ? ರಾಘೋಬನನ್ನು ಸಿಂಹಾಸನಚ್ಯುತನನ್ನಾಗಿ ಮಾಡಲಿಕ್ಕೆ ಕೈಕೊಳೆದುಕೊಂಡು ಬೆನ್ನಹತ್ತಿದ್ದೇಕೆ? ಮತ್ತೊಂದು ಮುಖ್ಯ ಮಾತೆಂದರೆ, ನಾರಾಯಣರಾಯನ ಕೊಲೆಯಲ್ಲಿ ರಘುನಾಥರಾಯನ ಅಂಗವು ವಿಶೇಷವಾಗಿರಲಿಲ್ಲ ರಘುನಾಥರಾಯನು ಮನಸ್ಸು ಮಾಡಿದ್ದರೆ, ನಾರಾಯಣರಾಯನ ಕೊಲೆಯನ್ನು ತಪ್ಪಿಸಬಹುದಿತ್ತು; ಆದರೆ ರಾಘೋಬನು,- ಮುತ್ಸದ್ದಿಯಲ್ಲದ ಹಾಗು ಹೆಂಡತಿಯ ಅಧೀನನಾದ ರಘುನಾಥರಾಯನು — ನಾರಾಯಣರಾಯನನ್ನು ರಕ್ಷಿಸಿಕೊಳ್ಳುವ ಸಾಹಸಕ್ಕೊಳಗಾಗಲಿಲ್ಲ ಈ ಅಪರಾಧವು ತೀರ ಕ್ಷುಲ್ಲಕವೆಂದು ನಾವು ಅನ್ನಲಾರೆವಾದರೂ, ಈ ಕಾರಣದಿಂದ ರಾಜ್ಯದ ಪ್ರಮುಖರೆಲ್ಲರೂ ರಘುನಾಥರಾಯನನ್ನು ಪಟ್ಟದಿಂದ ತಳ್ಳುವ ನಿರ್ಧಾರಣೆ ಮಾಡಿಕೊಂಡುದು ಸಮಯೋಚಿತವಾದುದೆಂದು ಹೇಳಲಿಕ್ಕೆ ನಮಗೆ ಸಂಕೋಚವಾಗದಿರದು.

ಹೀಗಿರಲು, ಅಂದಿನ ಮಹಾರಾಷ್ಟ್ರದ ಪ್ರಮುಖರು ಸರಳಸ್ವಭಾವದವನೂ, ವೀರವೃತ್ತಿಯುವನೂ ಆದ ರಾಘೋಬನನ್ನು ಪಟ್ಟದಿಂದ ತಳ್ಳುವ ಅಟ್ಟಹಾಸ ನಡಿಸಿದ್ದೇಕೆ? ಅನಿಶ್ಚಿತ ಗರ್ಭಸ್ಥ ಭಾವೀ ಪೇಶ್ವೆಯನ್ನೇ ನಚ್ಚಿದ್ದೇಕೆ? ಕನ್ನಡಿಗರ ವೈಭವಕಾಲಕ್ಕಿಂತಲೂ ಮರಾಟಿಗರ ಗೌರವ ಸಮಯವು ಹೆಚ್ಚು ಆಧುನಿಕವಾದದ್ದು. ಮೇಲಾಗಿ ಈಗಳಿನ ಕಾಲದಲ್ಲಿ ಮರಾಟಿಗರಲ್ಲಿ ಇತಿಹಾಸ ವ್ಯಾಸಂಗಿಗಳು ಹೆಚ್ಚಾಗಿದ್ದಾರೆ. ಈ ಮೊದಲಾದ ಕಾರಣಗಳಿಂದ ಮರಾಟಿಗರ ಇತಿಹಾಸವು ಕರ್ನಾಟಕದ ಇತಿಹಾಸದಂತೆ ಮಸಮಸಕಾಗಿ ಉಳಿದಿಲ್ಲ. ಮಹಾರಾಷ್ಟ್ರದ ಇತಿಹಾಸಕಾರರು ತಮ್ಮ ಇತಿಹಾಸದಲ್ಲಿ ಆ ತಮ್ಮ ಗೌರವದ ಸಮಯದ ಸಣ್ಣ ಪುಟ್ಟ ಸಂಗತಿಗಳನ್ನು ಸಹ ಉಲ್ಲೇಖಿಸಿದ್ದಾರೆ. ಕಾರಣ ನಾವು ಮರಾಟಿಗರ ಇತಿಹಾಸವನ್ನು ಸೂಕ್ಷ್ಮ ರೀತಿಯಿಂದ ಅಭ್ಯಾಸಿಸಿದರೆ, ಮೇಲಿನ ಪ್ರಶ್ನೆಗಳಿಗೆ ಸಮರ್ಪಕ ಉತ್ತರಗಳನ್ನು ಕಂಡು[illegible]ಬಹುದಾಗಿದೆ; ಆದರೆ ಕಾದಂಬರಿಕಾರರಿಗೆ ಇತಿಹಾಸದ ತಳವನ್ನು ಶೋಧಿಸುವ ಪರಿಶ್ರಮದ ಗರಜಿಲ್ಲ. ಅವರು ಇತಿಹಾಸದ ಮುಖ್ಯಸಂಗತಿಗಳನ್ನು ತಮ್ಮ ಕಲ್ಪನೆಗಳ ಬಲದಿಂದ ವಾಚಕರ ಮೇಲೆ ಪರಿಣಾಮವಾಗುವಂತೆ ಮನೋರಂಜಕ ರೀತಿಯಿಂದ ಬರೆದರೆ ತೀರಿತು. ಈ ದೃಷ್ಟಿಯಿಂದ [illegible] ಕಾದಂಬರಿಯು ಉತ್ತಮವಾಗಿದೆ

[illegible]

ಎಲ್ಲಿ ಹೋದರೂ ಬಿಡತಕ್ಕವನಲ್ಲ. ತಿಳಿಯಿತೇ? ನಿನ್ನ ಇದಿಷ್ಟೇ ನೀಚತನಕ್ಕಾಗಿ ನಿಮ್ಮೆಲ್ಲರನ್ನೂ ಗೊತ್ತಿಗೆ ಹಚ್ಚಿದರೇನೇ ನನ್ನ ಹೆಸರು ವಿನಾಯಕರಾಯ. ಎಚ್ಚರವಿರಲಿ; ಎಂದು ಪ್ರತಿಜ್ಞೆ ಮಾಡಿ, ಒಬ್ಬ ಕಾರಕೂನನನ್ನು ಕೂಗಿ ಕರೆದು, ಹವಾಲದಾರರನ್ನು ಕರೆದುಕೊಂಡು ಬರಲಿಕ್ಕೆ ಕಳಿಸಿ, ತಮ್ಮ ಮಹಡಿಯ ಮೇಲಿನ ಖೋಲಿಯಲ್ಲಿ ಹೋಗಿ ಕುಳಿತುಕೊಂಡರು. ಇತ್ತ ನೀಲಗಂಗಾಬಾಯಿಯು ತನ್ನ ಜಾಣತನವನ್ನು ಹೊಗಳಿಕೊಳ್ಳುತ್ತ ಅಡಿಗೆಯ ಮನೆಯ ದಾರೀಹಿಡಿದಳು.

ಸಂಜೆಯ ಏಳು ಘಂಟೆಯ ಸಮಯಕ್ಕೆ ಕುಳಿಂದಸ್ವಾಮಿ ಹವಾಲದಾರರು ಬಂದರು. ಇಬ್ಬರೂ ಕೆಲಹೊತ್ತಿನ ವರೆಗೆ ಏಕಾಂತವಾಗಿ ಕುಳಿತಮೇಲೆ ಹವಾಲದಾರರು ಹೊರಬಿದ್ದು:—ಇದರಲ್ಲಿ ನನ್ನ ಕರಾಮತಿಯನ್ನಾದರೂ ನೋಡಿರಿ. ನಾಳೆ ಇಷ್ಟೊತ್ತಿನ ಒಳಗಾಗಿ ಇಬ್ಬರನ್ನೂ ಹಾಕಿಸಿದರಾಯಿತೋ ಇಲ್ಲೋ? ಇದಕ್ಕೆ ನೀವು ಸ್ವಲ್ಪೂ ಚಿಂತೆ ಮಾಡಬೇಡಿರಿ. ಆ ಅಮರ್ಯಾದೆಯು ನಿಮಗಲ್ಲ, ನನಗೆ. ನಾನು ಹೇಳಿದಷ್ಟು ವ್ಯವಸ್ಥೆಯನ್ನು ಮಾತ್ರ ನೀವು ಬೆಳಗಾಗುವದರೊಳಗಾಗಿ ಮಾಡಬೇಕು. ನಾನು ಬೆಳಗಿನ ನಾಲ್ಕು ಗಂಟೆಗೆ ಇಲ್ಲಿಗೆ ಬರುತ್ತೇನೆ. ಹಾಗೆಯೇ ಇಬ್ಬರೂ ಕೂಡಿ ಹೋಗಿ ಬರೋಣವಂತೆ; ಎಂದು ಆಢ್ಯತೆಯಿಂದ ನುಡಿದು, ಹೊರಟು ಹೋದರು. ವಿನಾಯಕರಾಯರು ಮಾತ್ರ ಖೋಲಿಯಲ್ಲಿಯೇ ಉಳಿದು, ಏನನ್ನೋ ಯೋಚಿಸಹತ್ತಿದರು.



## ಮೂರನೆಯ ಪರಿಚ್ಛೇದ.



ಬೆಳಗಿನ ನಾಲ್ಕು ಘಂಟೆಯ ಸಮಯ ಉಲ್ಲಾಸಯುಕ್ತ ಸ್ವಭಾವದ ನಮ್ಮ ಮುರಲೀಧರನು ಅಮರಕೋಶದೊಳಗಿನ "ಶಂಭುರೀಶಃ ಪಶುಪತಿಃ ಶಿವಃ ಶೂಲೀ ಮಹೇಶ್ವರಃ|" ಎಂಬ ಶ್ಲೋಕವನ್ನು ಸುಸ್ವರದಿಂದ ಅನ್ನುತ್ತ ಮದಾರಮಡ್ಡಿಯ ಕೆಳಗಿರುವ ಜಜ್ಜರಭಾವಿಯ ಕಡೆಗೆ ಸಾಗಿದ್ದನು.

ಮುರಲೀಧರನು ಪ್ರತಿದಿನ ತಪ್ಪದೆ ಪ್ರಾತಃಕಾಲದ ನಾಲ್ಕು ಘಂಟೆಗೆದ್ದು ಶೌಚಕರ್ಮವನ್ನು ತೀರಿಸಿಕೊಂಡು, ಆ ಮೇಲೆ ಬಾವಿಗೆ ಸ್ನಾನಕ್ಕಾಗಿ ಹೋಗುವನು; ಅಲ್ಲಿ ಅಂಜಿಕೆಯಿಲ್ಲದೆ ಮನಬಂದಂತೆ ಈಸಾಡಿ, ದೋತರವನ್ನೊಗೆದುಕೊಂಡು, ಹಾಗೆಯೇ ಅಭ್ಯಾಸದ ಖೋಲಿಗೆ ಹೋಗುವನು. ಓರಿಗೆಯ ಗೆಳೆಯರೊಂದಿಗೆ ಹತ್ತು ಘಂಟೆಯ ವರೆಗೆ ಅಭ್ಯಾಸ ಮುಗಿಸಿಕೊಂಡು, ಆ ಮೇಲೆ ಮನೆಗೆ ಬರುವನು. ಈ ನಿಯಮದಲ್ಲಿ ಅವನು ಎಂದೂ ಅಂತರವಾಗಗೊಡುತ್ತಿದ್ದಿಲ್ಲ.

ದಿನದಂತೆ ಈ ದಿವಸ ಸ್ನಾನಕ್ಕೆ ನಡೆದ ಮುರಲೀಧರನು ಬಾವಿಯ ಸಮೀಪಕ್ಕೆ ಬರಲು, ಒಳಗೆ ಯಾರೋ ಗುಜು ಗುಜು ಮಾತಾಡುತ್ತಿರುವಂತೆ ಕೇಳಬರಹತ್ತಿತು. ಕಲ್ಲಿನಿಂದ ಕಟ್ಟಿದ ಆ ಹೊಕ್ಕುತುಂಬುವ ಬಾವಿಯಲ್ಲಿ ಹಗಲಿನಲ್ಲಿ ಕೂಡಾ ಒಬ್ಬರೇ ಒಗೆಯಲಿಕ್ಕೆ ಹೋಗಲು ಭಯಪಡುತ್ತಿದ್ದರು. ಅರಿವೆಯ ಒಂದು ಪೆಟ್ಟು ಹಾಕಿದರೆ, ಭಯಂಕರ ಪ್ರತಿಧ್ವನಿಯಿಂದ ಮೈಮೇಲೆ ಮುಳ್ಳು ಬರುವ ಆ ಅಗ್ಗಾರದ ಬಾವಿಯಲ್ಲಿ, ಇಂಥ ರಾತ್ರಿ ಹೊತ್ತಿನೊಳಗೆ ಎಂದೂ ಇಲ್ಲದೆ ಈ ದಿನ ಯಾರು ಮಾತಾಡುತ್ತಿರಬಹುದು? ಎಂದು ಯೋಚಿಸುತ್ತ ಮುರಲೀಧರನು ಒಂದೊಂದೇ ಪಾವಟಿಗೆಗಳನ್ನು ಇಳಿಯಹತ್ತಿದನು; ಆದರೆ, ನೀರಿನ ಹತ್ತರ ಬಂದು ನೋಡುತ್ತಾನೆ; ಅಲ್ಲಿ ಯಾರೂ ಇದ್ದಿಲ್ಲ! ಇದರಿಂದ ಅವನಿಗೆ ಆಶ್ಚರ್ಯವಾದದ್ದಲ್ಲದೆ, ಕೆಲವು ಪುಕ್ಕಜನರಿಂದ ಆ ಬಾವಿಯ ವಿಷಯಕ್ಕೆ ಭೂತ-ಪಿಶಾಚಿಗಳ ಅನೇಕ ಭೀತ್ಯಾಸ್ಪದ ಸಂಗತಿಗಳನ್ನು ಕೇಳಿದ್ದನಾದ್ದರಿಂದ ಅಂಜಿಕೆಯೂ ಬಂದಿತು; ಆದರೂ ಅವನು ಧೈರ್ಯವನ್ನು ತಂದುಕೊಂಡು, ಎಡಗಡೆಯ ಕಲ್ಲಿನ ಗೂಡಿನೊಳಗೆ ಮಡಿಯ ದೋತರವನ್ನೂ, ಮೈಲಿಗೆಯ ಅರಿವೆಯು

ಗಂಟನ್ನೂ ಇಟ್ಟು, ನೀರೊಳಗೆ ಕಾಲುಚಾಚಿ ಪಾವಟಿಗೆಯ ಮೇಲೆ ಕುಳಿತು ಹಲ್ಲು ತಿಕ್ಕಿಕೊಳ್ಳಹತ್ತಿದನು. ಹಲ್ಲುಜ್ಜುತ್ತಿರಲು ಅವನ ದೃಷ್ಟಿಯು ನೀರಿನ ಮೇಲೆ ಬಿದ್ದಿತು. ತನ್ನ ಹಿಂದೆ ಕಪ್ಪುವರ್ಣದ ಭಯಪ್ರದ ವೇಷವನ್ನು ಧರಿಸಿಕೊಂಡ ಎರಡು ಅಕರಾಳ-ವಿಕರಾಳ ಮೂರ್ತಿಗಳು ನಿಂತುಕೊಂಡಿರುವಂತೆ ನೀರಿನಲ್ಲಿ ಪ್ರತಿಬಿಂಬವು ಕಾಣಿಸಿತು. ಕೂಡಲೆ, ಅಂಜಿಕೆಯಿಂದ ಹೌಹಾರಿ ಮುರಲೀಧರನ ಎದೆಯು ಹಾರಹತ್ತಿದ್ದಲ್ಲದೆ, ಮೈನಡುಗಹತ್ತಿತು ತಿರುಗಿ ನೋಡಲಿಕ್ಕೂ ಕೂಡಾ ಧೈರ್ಯ ಸಾಲದ್ದರಿಂದ ಆ ಕೋಮಲಾಂತಃಕರಣೆಯು ತನ್ನ ಎರಡೂ ಕಣ್ಣುಗಳನ್ನು ಕೈಗಳಿಂದ ಗಟ್ಟಿಯಾಗಿ ಮುಚ್ಚಿಕೊಂಡನು. ಆದರೂ ಅಂಜಿಕೆಯು ಬಿಡಲೊಲ್ಲದು. ಎಡಬಲಕ್ಕೆ ಏನಾದರೂ ಸ್ವಲ್ಪ ಸಪ್ಪಳವಾದರಾಯಿತು, ಭೀತಿಯಿಂದ ಜೀವವು ತಳಮಳಿಸುತ್ತಿತ್ತು. ಹೀಗೆಯೇ ನಾಲ್ಕೈದು ನಿಮಿಷಗಳನ್ನು ಕ್ರಮಿಸಿದನಂತರ ಅವನು ಸಾವಕಾಶವಾಗಿ ಕಣ್ಣು ತೆರೆದು ನೋಡುವಷ್ಟರಲ್ಲಿ ನೀರೊಳಗೆ ಒಮ್ಮಿಂದೊಮ್ಮೆ 'ಧಡಂ' ಎಂಬ ಭಯಂಕರ ಸಪ್ಪಳವಾಗಿ ಭಗ್ಗನೆ ಉರಿಯೆದ್ದಂತಾಯಿತು! ಕೂಡಲೆ ಅವನು ಭಯಭೀತನಾಗಿ ಒಮ್ಮೆಲೆ ಚಿಟ್ಟನೆ ಚೀರಿ ಸ್ಮೃತಿದಪ್ಪಿ ಹಿಂದಕ್ಕೆ ಬಿದ್ದುಬಿಟ್ಟನು. ನೋಡನೋಡುವಷ್ಟರಲ್ಲಿ ಭಯಂಕರ ವೇಷದ ಆ ಮೂರ್ತಿಗಳು ಕನಿಕರವಿಲ್ಲದೆ ಅವನ ಬಾಯಿಯಲ್ಲಿ ಅರಿವೆಯನ್ನು ತುರುಕಿ, ಹಗ್ಗದಿಂದ ಕೈಕಾಲುಗಳನ್ನು ಚನ್ನಾಗಿ ಬಂಧಿಸಿ, ಮುರಲೀಧರನು ಅಲ್ಲಿಗೆ ಬಂದಿದ್ದ ದಾರಿಯಿಂದಲೇ ಹೊತ್ತುಕೊಂಡು ಹೋಗಿಬಿಟ್ಟವು!

ಮುರಲೀಧರನನ್ನು ಯಾರು ಯಾತಕ್ಕೆ ಹೊತ್ತುಕೊಂಡು ಹೋಗಿರಬಹುದು? ಬಾಯಲ್ಲಿ ಅರಿವೆಯನ್ನು ತುರುಕಲು ಕಾರಣವೇನಿರಬಹುದು? ಮುರಲೀಧರನು ನಡೆದುಬಂದದಾರಿಯಿಂದಲೇ ಹೊತ್ತುಕೊಂಡು ಹೋದರೆಂದಮೇಲೆ ಅವರ ಮನೆಗೇ ಅವನನ್ನು ಒಯ್ದಿರಬಹುದೇನು? ವಾಚಕ ಮಹಾಶಯರೇ, ಇವೆಲ್ಲ ಸಂಗತಿಗಳನ್ನು ತಿಳಿದುಕೊಳ್ಳಲಿಕ್ಕೆ ನೀವು ಅತ್ಯಾತುರ ಪಡುತ್ತಿರಬಹುದು. ನಾವಾದರೂ ಅದಕ್ಕಾಗಿಯೇ ಮುರಲೀಧರನ ಮನೆಗೆ ಹೋಗುವೆವು. ನೀವೂ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ನಮ್ಮೊಡನೆ ಬೇಗನೆ ಬನ್ನಿರಿ.

ಮುಂಜಾನೆ ಒಂಬತ್ತು ಬಾರಿಸಿದಾಗ್ಗೆ ಕಮಲಾಬಾಯಿಯು ಅಡಿಗೆಯ ಕೆಲಸವನ್ನು ತೀರಿಸಿ, ನಡುಮನೆಯ ಖೋಲಿಯಲ್ಲಿ ಝಾಂಸಿ ಮಹಾ

ರಾಣಿಯವರ ಚರಿತ್ರವನ್ನು ಓದುತ್ತ ಕುಳಿತಿದ್ದಳು. ವಿದ್ಯಾಭಿರುಚಿಯುಳ್ಳ ರಂಗೆರಾಯರು, ಕಮಲಾಬಾಯಿಗೆ ಉಚ್ಚತರದ ಕನ್ನಡ-ಮರಾಠೀ ಭಾಷೆಗಳ ಶಿಕ್ಷಣವನ್ನು ಮನೆಯಲ್ಲಿಯೇ ಕೊಡಿಸಿದ್ದರು. ಕಮಲಾಬಾಯಿಯಾದರೂ ತೀಕ್ಷ್ಣಬುದ್ಧಿಯುವಳಾದ್ದರಿಂದ ಕೂಡಿದಾಗ್ಗೆ ನೀತಿಯ ಗ್ರಂಥಗಳನ್ನೋದುವದನ್ನೂ, ಮಾಸಿಕ ಪುಸ್ತಕಗಳಲ್ಲಿ ವನಿತೆಯರಿಗುಪಯುಕ್ತವಾದ ಲೇಖಗಳನ್ನು ಬರೆಯುವದನ್ನೂ ಮಾಡುತ್ತಿದ್ದಳು. ಇದರಿಂದ ಎಲ್ಲ ಜನರಿಗೂ ಕಮಲಾಬಾಯಿಯ ಪರಿಚಯವಾದಂತಾಗಿತ್ತು. ಓದುತ್ತ ಕುಳಿತ ಕಮಲಾಬಾಯಿಯು ಕೆಲ ಹೊತ್ತಿನ ಮೇಲೆ ಮುರಲೀಧರನ ಸಣ್ಣ ಕಪಾಟನಲ್ಲಿ, ಆ ಪುಸ್ತಕವನ್ನು ಇಡಹೋಗಲು, ಅಲ್ಲಿದ್ದ ಒಂದು ಚಿತ್ರಪಟವು ಅವಳ ದೃಷ್ಟಿಗೆ ಬಿದ್ದಿತು. ಆ ಚಿತ್ರದ ಕೆಳಬದಿಗೆ "ಸಂನ್ಯಾಸಿ, ನ್ಯಾಯಾಧೀಶ, ಮುಂಬಯಿ" ಎಂದು ಬರೆದಿತ್ತು. ಚಕಿತಳಾಗಿ ಸೂಕ್ಷ್ಮರೀತಿಯಿಂದ ಪರೀಕ್ಷಿಸಿ ನೋಡಹತ್ತಿದಂತೆ ಆ ಚಿತ್ರಾಂಕಿತ ಮೂರ್ತಿಯು, ಕಮಲಾಬಾಯಿಯ ಹೃದಯವನ್ನು ಮೆಲ್ಲ ಮೆಲ್ಲನೆ ಎಳಕೊಳ್ಳಹತ್ತಿತು! ಅವಳ ಮೈಯಲ್ಲಿ ಅನಂಗನ ಸಂಚಾರವಾದಂತಾಗಿ, ಅವಳು ವ್ಯಗ್ರಳಾದಳು. ಈ ಮಹಾನುಭಾವರು ಯಾರಾಗಿರಬಹುದು? ಪ್ರಾಣನಾಥರ ಚಿತ್ರವನ್ನೇ ಇದು ಅಚ್ಚಳಿಯದೆ ಹೋಲುತ್ತಿರುವದಲ್ಲಾ! ಇದೊಳ್ಳೆಯ ಆಶ್ಚರ್ಯವು. ಇವರು ನಿಜವಾಗಿ ಸಂನ್ಯಾಸಿಯೇ ಇರಬಹುದೇನು? ಸಂನ್ಯಾಸಿಯಾಗಿದ್ದರೆ, ಈ ಅಧಿಕಾರವೂ, ಇಷ್ಟು ಸಂಬಳವೂ, ಯಾರ ಸಲುವಾಗಿ? ಇದರಲ್ಲಿ ಮಾತ್ರ ಏನೋ ಗೂಢವಿದ್ದಂತೆ ತೋರುತ್ತದೆ, ಎಂದು ಆ ತರುಣಿಯು ಯೋಚಿಸುತ್ತ ತನ್ನ ಪೆಟ್ಟಿಗೆಯೊಳಗೆ ಜತನದಿಂದ ಕಾದಿಟ್ಟದ್ದ ಒಂದು ಚಿತ್ರಪಟವನ್ನು ತೆಗೆದುಕೊಂಡು ಹಿತ್ತಲಲ್ಲಿ ಹೋಗಿ ಒಂದಕ್ಕೊಂದು ಹೋಲಿಸಿ ನೋಡಹತ್ತಿದಳು.

ಕಮಲಾಬಾಯಿಯು ಹೀಗೆ ಚಿತ್ರನಿರೀಕ್ಷಣದಲ್ಲಿ ಮಗ್ನಳಾಗಿರಲು, ಇಬ್ಬರು ಪೋಲೀಸರು ಹಿತ್ತಲದ ಆವಾರದ ಗೋಡೆಯನ್ನು ಜಿಗಿದು ಬಂದು, ಕಮಲಾಬಾಯಿಯ ಮುಂದೆ ನಿಂತರು. ಕೂಡಲೆ ಕಮಲಾಬಾಯಿಯು ಚಕಿತಳಾಗಿ ಆ ಚಿತ್ರಗಳನ್ನು ಮರೆ ಮಾಡಿ ಹಿಡಿದು, ಗಂಭೀರ ಸ್ವರದಿಂದ ಪೋಲೀಸರನ್ನು ಕುರಿತು:— ಇದೇನು! ಹೇಳದೆ-ಕೇಳದೆ ಯಾವ ಉದ್ದೇಶದಿಂದ ನೀವು ಗೋಡೆಯನ್ನು ಜಿಗಿದು ಒಳಗೆ ಬಂದಿರಿ? ಎಂದು ಕೇಳಿ

ತೀಕ್ಷ್ಣದೃಷ್ಟಿಯಿಂದೆ ಅವರ ಮುಖ ನೋಡಹತ್ತಿದಳು. ಕೂಡಲೆ ಹಿಬ್ಬ ಪೋಲೀಸನು:—ಅವ್ವಾ, ನಾವೇನು ದುರುದ್ದೇಶದಿಂದ ಗೋಡೆಯನ್ನು ಜಿಗಿದು ಬಂದಿಲ್ಲ. ಅಕೋ ನೋಡಿರಿ, ಅಮಲದಾರರು ಬಾಗಿಲಲ್ಲಿ ನಿಂತಿರುವರು. ಅವರ ಅಪ್ಪಣೆಯಿಂದ ಇಲ್ಲಿಗೆ ಬಂದಿದ್ದೇವೆ, ಎಂದು ವಿನಯದಿಂದ ಉತ್ತರ ಕೊಟ್ಟನು

ಅಷ್ಟರಲ್ಲಿ ವಿನಾಯಕರಾಯರೂ, ಕುಳಿಂದಸ್ವಾಮಿ ಹವಾಲದಾರರೂ, ಮತ್ತೆ ಇಬ್ಬರು ಪೋಲೀಸರೂ ಬಾಗಿಲಲ್ಲಿ ನಿಂತುಕೊಂಡು, ಮುರಲೀ-ಮುರಲೀ ಎಂದು ಕೂಗುವ ಸ್ವರವು ಕೇಳಬರಹತ್ತಿತು. ಇದು ಏನೋ ಮತ್ತೆ ಗಂಡಾಂತರವು ಬಂದಿತೆಂದು ಅಂಜಕೊಂಡರೂ, ಆ ಚತುರಳು ಸಮಾಧಾನ ವೃತ್ತಿಯಿಂದ ಅಡಿಗೆಯ ಮನೆಗೆ ಬಂದು, ಅತ್ತೆಗೆ ಈ ಎಲ್ಲ ಸಂಗತಿಯನ್ನು ತಿಳಿಸಿದಳು. ಪುಕ್ಕ ಸ್ವಭಾವದ ಆ ಪುತ್ರ ಪ್ರೇಮಿಯು ಮುರಲೀಧರನನ್ನು ಹೊಡೆದ ಹವಾಲದಾರರೇ ಬಂದಿರುವರು; ಎಂದು ಕೇಳಿಯಂತೂ ಗಡಗಡನೆ ನಡುಗಿದಳು; ಆದರೆ, ಕಮಲಾಬಾಯಿಯು ಧೈರ್ಯ ಹೇಳಿದ್ದರಿಂದ ಆಕೆಯು ಹೊರಗೆ ಬಂದು, ವಿನಾಯಕರಾಯರನ್ನುದ್ದೇಶಿಸಿ:—ತಮ್ಮಾ, ಮುರಲಿಯು ಯಾತಕ್ಕೆ ಬೇಕು? ದಿನಾಲು ಈ ಹೊತ್ತಿನಲ್ಲಿ ಅವನು ಓದುವ ಶಾಲೆಯಲ್ಲಿರುತ್ತಾನೆ, ಎಂದು ಉತ್ಸುಕತೆಯಿಂದ ನುಡಿದಳು; ಸೀತಾಬಾಯಿಯ ಈ ಮಾತಿಗೆ ಹವಾಲದಾರರು ಸೊಕ್ಕಿನಿಂದ:—ಅವನ ಕಡೆಗೆ ಸ್ವಲ್ಪ ಕೆಲಸವಿತ್ತು. ಮಕರಂದನೂ ಮನೆಯಲ್ಲಿಲ್ಲವೇನು? ಎಂದು ಕೇಳಿದರು. ಅದಕ್ಕೆ ಸೀತಮ್ಮನು:—ಅವನೂ ಮನೆಯಲ್ಲಿಲ್ಲ, ಓದುವ ಶಾಲೆಗೆ ಹೋಗಿರುವನು. ಹವಾಲದಾರರೇ, ಇದೇನೋ ನನಗೆ ವಿಚಿತ್ರವಾಗಿ ಕಾಣುತ್ತದೆ. ವಿನಾಯಕಾ, ಹಿತ್ತಲು ಮುಂಚೆಗಳಲ್ಲಿ ಇಷ್ಟು ಕಾವಲು ಯಾಕೆ? ಅದೇನು ಇದ್ದದ್ದನ್ನು ಬಾಯಿಬಿಚ್ಚಿ ಹೇಳಬಾರದೇ! ಎಂದು ವ್ಯಗ್ರಳಾಗಿ ಕೇಳಲು, ವಿನಾಯಕರಾಯರು ವ್ಯಂಗ ಸ್ವರದಿಂದ:—ಬಾಯಿಬಿಚ್ಚಿ ಹೇಳಬೇಕೇ? ನಿನಗೆ ಏನೂ ಗೊತ್ತಿರಲಿಕ್ಕಿಲ್ಲ. ಈ ಎಲ್ಲ ಕಾರಭಾರವು ನಿನ್ನ ಮಸಲತ್ತಿಲ್ಲದೆ ಎಲ್ಲಿ ಆಗುವದು? ಇನ್ನೊಂದು ಕ್ಷಣಹೊತ್ತು ತಡೆ; ಅಂದರೆ, ತಿಳಿಯುವದು; ಎಂದು ಹೇಳಿದರು; ಸೀತಾಬಾಯಿಯು ಮತ್ತಿಷ್ಟು ವ್ಯಾಕುಲಚಿತ್ತಳಾಗಿ:—ಏನು ತಿಳಿಯುವದು? ವಿನಾಯಕಾ! ನೀನೇ ಹೀಗೆ....ಎಂದು ನುಡಿಯುವಷ್ಟರಲ್ಲಿ

ಹವಾಲದಾರರು:—ಅಮ್ಮನವರೇ, ಸಾಕುಮಾಡಿರಿ; ಅದೆಲ್ಲವನ್ನು ತಿಳಿಸುವದಕ್ಕಾಗಿಯೇ ನಾವಿಲ್ಲಿಗೆ ಬಂದಿರುತ್ತೇವೆ. ಮುರಲೀಧರನು ಓದಲಿಕ್ಕೆ ಹೋಗುವ ಖೋಲಿ ಎಲ್ಲಿದೆ? ಮೊದಲು ಹೇಳಿರಿ. "ಗವಳಿಗರ ಓಣಿಯಲ್ಲಿ ರಾಮರಾವ ದೇಸಾಯಿ ಇವರ ಮನೆಯ ಹತ್ತರ ಇದೆ." ಎಂದು ಹೇಳಿ, ಅಲ್ಲಿ ನಿಲ್ಲಲಿಕ್ಕೆ ಸೊಗಸಾಗದ್ದರಿಂದ ಸೀತಾಬಾಯಿಯು ಒಳಗೆ ಹೋಗಿಬಿಟ್ಟಳು.

ಕುಳಿಂದ ಸ್ವಾಮಿಯವರು ಒಬ್ಬ ಪೋಲೀಸನನ್ನು ಮುರಲೀಧರನನ್ನು ಕರೆದುಕೊಂಡು ಬರಲಿಕ್ಕೆ ಕಳಿಸಿ, ಮತ್ತೊಬ್ಬನಿಗೆ ಪಂಚರನ್ನು ಕರೆಯಲಿಕ್ಕೆ ಹೇಳಿದರು. ವಿನಾಯಕರಾಯರು ಹವಾಲದಾರರೊಂದಿಗೆ ಹೊರಗೆ ಕುಳಿತುಕೊಳ್ಳದೆ ಒಳಗೆ ಬಂದು, ಸಂದಿಗೊಂದಿಗಳೊಳಗಿನ ಸಾಮಾನುಗಳನ್ನು ಕೆಟ್ಟೀತೆಂಬ ಎಚ್ಚರವಿಲ್ಲದೆ ಬೈಲಿಗೊಗೆಯಹತ್ತಿದರು. ಇದೆಲ್ಲ ಅನರ್ಥವನ್ನು ನೋಡಿ, ಸೀತಾಬಾಯಿಯು ಮುಂದುಗಾಣದೆ ನಿಂತಳು; ಆದರೆ, ಅಲ್ಲಿಯೇ ಬಾಗಿಲ ಮರೆಗೆ ನಿಂತುಕೊಂಡಿದ್ದ ಕಮಲಾಬಾಯಿಗೆ ಮಾತ್ರ ಇದು ತಡೆಯಲಿಲ್ಲ. ಓರಣದಿಂದ ಇಟ್ಟ ಅರಿವೆ-ಅಂಚಡಿಗಳೆಲ್ಲ ಅಸ್ತವ್ಯಸ್ತವಾಗಿ ಬಿದ್ದದ್ದನ್ನು ನೋಡಿ, ಸಂತಾಪದಿಂದ:—ವಿನಾಯಕರಾಯರೇ, ಇದನ್ನೇನು ನಡಿಸಿದಿರಿ! ನಮ್ಮನ್ನು ಈ ಊರಲ್ಲಿ ಇರಗೊಡಿಸುವಿರೋ-ಇಲ್ಲೋ? ಮುರಲೀಧರನು ಮಾಡಿದ್ದಾದರೂ ಏನು? ಅಕೋ ನೋಡಿರಿ. ಬಹು ಬೆಲೆಯುಳ್ಳ ಕಾಜಿನ ಹೂಜೆಯು ಒಡೆದು ಹೋಯಿತು. ನೀವು ಏನಾದರೂ ಹುಡುಕುವದಿದ್ದರೆ, ಸಾವಕಾಶವಾಗಿ ಹುಡುಕಿರಿ. ನಾವು ಬಡವರು. ಸಾಮಾನುಗಳನ್ನು ವ್ಯರ್ಥ ಹಾಳುಮಾಡಬೇಡಿರಿ; ಎಂದು ನುಡಿದು ಬಿದ್ದ ಜೀನಸುಗಳನ್ನು ಸರಿಮಾಡಹತ್ತಿದಳು. ವಿನಾಯಕರಾಯರು ಒಮ್ಮೆಲೇ ಕಮಲಾಬಾಯಿಯ ಮೈಮೇಲೆ ಏರಿ ಹೋಗಿ:—ಮುರಲೀಧರನು ಮಾಡಿದ್ದಾದರೂ ಏನೆಂದು ಅರಿಯದವಳಂತೆ ಕೇಳುವಿಯಾ? ಒಳ್ಳೆಯ ಮಾತಿನಿಂದ ಎಲ್ಲ ದಾಗೀನೆ-ರೂಪಾಯಿಗಳನ್ನು ಕೊಟ್ಟರೆ ತೀರಿತು; ಇಲ್ಲದಿದ್ದರೆ ನಿಮ್ಮೆಲ್ಲರನ್ನು ನಿಲ್ಲಿಸಿ ಸುಡಿಸುವೆನು. ಹೂಂ ಲಗು ಹೇಳು, ದಾಗೀನೆ ರೂಪಾಯಿಗಳೆಲ್ಲಿರುವವು? ಎಂದು ಕರ್ಕಶ ಸ್ವರದಿಂದ ಕೇಳಿದರು. ಕಮಲಾಬಾಯಿಯು ಹಿಂದಕ್ಕೆ ಸರಿದು, ಗಾಬರಿಯಾಗಿ ಥರಥರ ನಡುಗುತ್ತ:—ವಿನಾಯಕರಾಯರೇ, ದಾಗೀನೆ-ರೂಪಾಯಿಗಳೆಲ್ಲಿಯವು? ಯಾರು

ತಕ್ಕೊಂಡಿರುವರು? ಆ ಬಗ್ಗೆ ನನಗೆ ಏನೂ ತಿಳಿಯದ್ದರಿಂದ ನಾನೇನು ಹೇಳಲಿ? ಎಂದು ನುಡಿದಳು. ವಿನಾಯಕರಾಯರು ಮತ್ತಿಷ್ಟು ಸಂತಪ್ತರಾಗಿ:—ದಾಗೀನೆ-ರೂಪಾಯಿಗಳನ್ನು ನೀನು ನೋಡಿಲ್ಲವೋ? ಎರಡು ಸಾವಿರ ರೂಪಾಯಿಯ ಜಂದಿಗೆಯನ್ನು ಎತ್ತಿಹಾಕಿರುವಿರಿ. ಈ ಮುದುವೆಗಾದರೂ ತಿಳಿಯಬಾರದೇ? ನೋಡಿರಿ, ಇನ್ನಾದರೂ ನಿಮಗೆ ಹೇಳುತ್ತೇನೆ. ಈಗ ನೀವು ಸುಮ್ಮನೆ ನನ್ನ ದಾಗೀನೆ-ರೂಪಾಯಿಗಳನ್ನು ಕೊಟ್ಟರೆ ತೀರಿತು; ಇಲ್ಲದಿದ್ದರೆ, ನಿಮ್ಮೆಲ್ಲರನ್ನು ಪೋಲೀಸರ ವಶಮಾಡಿ, ನನ್ನ ಮಾಲನ್ನು ಹೊರಗೆಡವಿಸುತ್ತೇನೆ. ಎಚ್ಚರವಿರಲಿ; ಎಂದು ಹೇಳಿ, ಸೀತಾಬಾಯಿಯನ್ನು ವಕ್ರದೃಷ್ಟಿಯಿಂದ ನೋಡಹತ್ತಿದರು. ಇದನ್ನು ಕೇಳಿಯಂತೂ ಕಮಲಾಬಾಯಿಯು ವಿಚಾರಶೂನ್ಯಳಾಗಿ, ದಂಗು ಬಡೆದು ನಿಂತಳು. ಅವಳ ಕಣ್ಣಿಗೆ ಕತ್ತಲುಗೂಡಿಸಿದಂತಾಗಿ, ನಿಲ್ಲಲಿಕ್ಕೆ ಕೂಡಾ ಶಕ್ತಿ ಇಲ್ಲದಂತಾಯಿತು. ಚನ್ನಿಗಮುಖವು ಅರಕ್ತವಾಗಿ, ಬೆವರಿಟ್ಟಿತು. ಅಶ್ರುಗಳು ಧಾರೆಗಟ್ಟಿ ಇಳಿದವು. ಮೈ ಮೇಲಿನ ಸೀರೆಯ ಸೆರೆಗು ಸರಿಯಾಗಿ, ರಮ್ಯವಾದ ಕುಚಮಂಡಲವು ಕಾಣುತ್ತಿದ್ದರೂ ಮಾನಧನಳಾದ ಕಮಲಾಬಾಯಿಗೆ ಅದರ ಪರವಿಯೇ ಇಲ್ಲದಾಯಿತು. ಅಷ್ಟರಲ್ಲಿ ವಿನಾಯಕರಾಯರು ಹಿಮ್ಮೆಲೇ ಹವಾಲದಾರರನ್ನುದ್ದೇಶಿಸಿ:—ಸ್ವಾಮಿಯವರೇ, ಲಗೂ ಬರ್ರಿ. ಸಿಕ್ಕಿತು! ಸಿಕ್ಕಿತು! ಕೊರಳಲ್ಲಿಯೇ ಅದೆ; ಎಂದು ಕೂಗಿ ಕರೆದರು. ಕೂಡಲೆ ಹವಾಲದಾರರು ಒಳಗೆ ಬಂದು, ಕಮಲಾಬಾಯಿಗೆ:—ಕಮಲೇ, ಕೊರಳೊಳಗಿನ ಕಳವಿನ ಕಂಠಿಯ ಹಾರವನ್ನು ಉಚ್ಚಿ ಕೆಳಗೆ ಇಡು; ಮತ್ತು ಉಳಿದ ದಾಗೀನೆ-ರೂಪಾಯಿಗಳನ್ನು ಬೇಗನೆ ಇದ್ದಲ್ಲಿಂದ ತೆಗೆದು ಕೊಡು; ಇಲ್ಲದಿದ್ದರೆ ಮೈ ನುಗ್ಗು ಮಾಡಿಕೊಳ್ಳಬೇಕಾದೀತು ನೋಡು; ಎಂದು ಗರ್ಜಿಸಿ, ಆ ಲಲಿತಾಂಗಿಯ ಕುಚಪ್ರದೇಶದ ಸೌಂದರ್ಯವನ್ನು ಎವೆಯಿಕ್ಕದೆ ನೋಡುತ್ತ ನಿಂತುಕೊಂಡರು.

ಹಾರವು ತನ್ನದಿದ್ದು ಕಳವಿನದು ಹೇಗಾಗುವದೆಂದು ಕಮಲಾಬಾಯಿಯು ಸಂತಾಪಗೊಂಡು ಸೆರಗನ್ನು ಸರಿಮಾಡಿಕೊಳ್ಳುತ್ತ:—ಹವಾಲದಾರಸಾಹೇಬರೆ, ನಿರಪರಾಧಿಗಳನ್ನು ಹೀಗೆ ಅಮರ್ಯಾದೆಯ ಮಾತುಗಳಿಂದ ನೋಯಿಸುವದು ಯೋಗ್ಯವಲ್ಲ. ಹಾರವನ್ನು ಬಿಚ್ಚಿಕೊಡೆಂದು ಹೇಳಿದಿರಲ್ಲವೇ? ಈ ಕಂಠಿಯ ಹಾರವು ನನ್ನದಿದ್ದು ಸಾಲದ ೨೫ ರೂಪಾಯಿಗೆ

ಳನ್ನು ಕೊಟ್ಟು ತರಿಸಲ್ಪಟ್ಟಿರುವದು. ಹೀಗಿದ್ದು ಯಾಕೆ ಬಿಚ್ಚಿ ಇಡಬೇಕು? ಎಂದು ಸ್ಪಷ್ಟವಾಗಿ ಮಾತಾಡಿದಳು. ದುರಭಿಮಾನದ ಹವಾಲದಾರರಿಗೆ ಕುವಲಾಬಾಯಿಯ ಈ ಮಾತು ಸಹನವಾಗಲಿಲ್ಲ. ಆವರು ಕೋಪಾವಿಷ್ಟ ರಾಗಿ ಕಣ್ಣು ಕೆಂಪಗೆ ಮಾಡಿಕೊಂಡು:—ಅ! ಏನೆಂದಿ? ಒಳ್ಳೆಯ ಮಾತಿನಿಂದ ಸುಮ್ಮನೆ ಹಾರವನ್ನು ಉಚ್ಚಿ ಇಡುವಿಯೋ-ಇಲ್ಲೋ? ಪೋಲೀಸರ ಕೈ ಇನ್ನೂ ನಿನಗೆ ಚನ್ನಾಗಿ ಗೊತ್ತಾದಂತೆ ತೋರಲಿಲ್ಲ. ಇವಳೇನೋ ಪತಿವ್ರತೆಯಂತೆ! ಇಷ್ಟು ಮರ್ಯಾದೆವಂತಳಿದ್ದರೆ ಕಳವಿನ ದಾಗೀನೆಯನ್ನು ಹಾಕಿಕೊಂಡು ಯಾಕೆ ಮೆರೆಯಬೇಕು? ನೂರು ರೂಪಾಯಿ ಸಾಲವಿರುತ್ತಿರಲು, ಇಪ್ಪತ್ತೈದು ರೂಪಾಯಿಗಳಿಗೆ ಯಾರಾದರೂ ಹಾರವನ್ನು ಕೊಡಬಹುದೋ? ಇಂಥ ಹಣ ಜಂಭವು ಪೋಲೀಸರ ಮುಂದೆ ನಡೆಯಲಾರದು. ಎಚ್ಚರವಿರಲಿ; ರಟ್ಟೆಗೆ ಹಗ್ಗಹಚ್ಚಿ ಊರಲ್ಲೆಲ್ಲ ಮೆರೆಯಿಸಿ ಬಿಟ್ಟೇನು? ಎಂದು ಆವೇಶದಿಂದ ನುಡಿದರು.

ಹೆಚ್ಚಿಗೆ ವಾದಿಸುವದು ಅನರ್ಥಕ್ಕೆ ಕಾರಣವೆಂದು ತಿಳಿದು ಕಮಲಾಬಾಯಿಯು ಹಿಂದು ತುಟಿಯನ್ನು ಎರಡು ಮಾಡದೆ ರಮಣೀಯವಾದ ಶಿಲಾಮೂರ್ತಿಯಂತೆ ಸುಮ್ಮನೆ ನಿಂತುಬಿಟ್ಟಳು; ಅಷ್ಟರಲ್ಲಿ ಮೂವರು ಪಂಚರು ಬಂದದ್ದಲ್ಲದೆ ಮುರಲೀಧರನನ್ನು ಕರೆಯಹೋದ ಪೋಲೀಸನು ಅವನು ಇಲ್ಲದ್ದರಿಂದ ಮಕರಂದನನ್ನು ಕರೆದುಕೊಂಡು ಬಂದನು. ಹವಾಲದಾರಸಾಹೇಬರು ಅಷ್ಟಕ್ಕೇ ತಮ್ಮ ಬಾಯಿಪೌರುಷವನ್ನು ಮುಗಿಸಿಕೊಂಡು ಹೊರಗೆ ಬಂದರು. ವಿನಾಯಕರಾಯರು ಮಾತ್ರ ಏನನ್ನೋ ಹಿದರಾಡುತ್ತ ಹೊಳಗೆ ಇದ್ದರು.

ಮೂವರು ಪಂಚರೊಳಗೆ ಮಹಾದೇವಪ್ಪನವರೂ ಇದ್ದರು. ಅವರು ಕುಳಿಂದ ಸ್ವಾಮಿಯನ್ನು ಕುರಿತು:—ಹವಾಲದಾರಸಾಹೇಬರೇ, ನಮ್ಮನ್ನು ಯಾಕೆ ಕರೆಯಿಸಿದಿರಿ? ಹೊಳಗೆ ಸಾವುಕಾರರು ಏನೇನೋ ಬೈದಾಡುತ್ತಿರುವರಲ್ಲ! ಎಂದು ಪ್ರಶ್ನಮಾಡಿದರು. ಅದಕ್ಕೆ ಹವಾಲದಾರರು ಉತ್ತರವಾಗಿ:—ಮನೆಯೊಳಗಿನ ಗಂಟನ್ನೆಲ್ಲ ಕಳ್ಳರ ಪಾಲುಮಾಡಿ, ಕಂಗಾಲರಾದ ಸಾವುಕಾರರು ಬೈದಾಡದೇ ಬಿಟ್ಟಾರೇ? ಎಂದು ನಗುತ್ತ ನುಡಿದರು. ಮಹಾದೇವಪ್ಪನವರು ಕಿಂಚಿತ ಆಶ್ಚರ್ಯದಿಂದ:—ಯಾರು? ಎಂದು ಕಳವು ಮಾಡಿದರು! ಮತ್ತು ತಮ್ಮಂದಿರ ಮನೆಯಲ್ಲಿ ಅದರ ಪಾರಾಯಣ

ಹೀಗೇಕೆ? ಕುಳಿಂದಸ್ವಾಮಿಯವರು ಸಮಾಧಾನಸ್ವರದಿಂದ:—ಅದೆಲ್ಲವನ್ನು ಹೇಳುವದಕ್ಕಾಗಿಯೇ ನಿಮ್ಮೆಲ್ಲರನ್ನು ಈಗ ಕರೆಯಿಸಿದೆ. ಕೇಳಿರಿ:—

ನಿನ್ನೆ ಸಾಯಂಕಾಲದ ಆರು ಗಂಟೆಯ ಸುಮಾರಕ್ಕೆ ವಿನಾಯಕ ರಾಯರೂ ನೀಲಗಂಗಾಬಾಯಿಯೂ ಮನೆಯಲ್ಲಿ ಇಲ್ಲದ ಸಮಯವನ್ನು ಸಾಧಿಸಿ, ಮುರಲೀಧರನು ಹಿತ್ತಲಬಾಗಿಲಿಂದ ಅವರ ಮನೆಯನ್ನು ಹೊಕ್ಕು, ಕಪಾಟಿನ ಕೀಲೀ ಮುರಿದು, ತೋಟಾಚಾರ್ಯರ ಮನೆಯಿಂದ ಅದೇ ತಂದ ಸಾವಿರರೂಪಾಯಿಗಳನ್ನೂ, ಆ ಕೂಸಿನ ಬಂಗಾರದ ಗುಂಡು-ಬಿಂದಲಿ-ನಾಗಮುರಿಗೆಗಳನ್ನೂ, ಈಗ ಕಮಲಾಬಾಯಿಯ ಕಂಠದಲ್ಲಿರುವ ಹಾರ ವನ್ನೂ ಕಳವು ಮಾಡಿಕೊಂಡು ಬಂದಿರುವನು. ಇಗೋ ನೋಡಿರಿ, ಇನ ಸ್ಪೇಕ್ಟರರ ಸಮಕ್ಷಮವಾಗಿ ಬರೆದ ಅಲ್ಲಿಯ ಪಂಚನಾಮೆಯನ್ನೂ ಮತ್ತು ಕಳವು ಮಾಡಿಕೊಂಡು ಮುರಲೀಧರನು ಗೋಡೆಯನ್ನು ಜಿಗಿದು ಓಡಿ ಹೋಗುವದನ್ನು ನೋಡಿದವರ ಜಬಾನಿಗಳನ್ನೂ, ಎಂದು ನುಡಿದು, ಜೇಬಿ ನೊಳಗಿಂದ ಕೆಲವು ಕಾಗದಗಳನ್ನು ತೆಗೆದು ನೆಲಕ್ಕೆ ಅಪ್ಪಳಿಸಿಟ್ಟು, ಮತ್ತೆ:-ಈಗ ಈ ಮನೆಯನ್ನು ಜಪ್ತಮಾಡಲಿಕ್ಕೂ, ಮುರಲೀಧರನನ್ನು ಹಿಡಿದು ಕೊಂಡು ಹೋಗಲಿಕ್ಕೂ ಇನಸ್ಪೇಕ್ಟರರ ಅಪ್ಪಣೆಯ ಮೇರೆಗೆ ಬಂದಿರು ತ್ತೇವೆ; ಮುರಲಿಯಂತೂ ಎಲ್ಲಿಯೋ ಓಡಿಹೋದಂತೆ ತೋರುತ್ತದೆ. ಈಗ ನಿಮ್ಮ ಸಮಕ್ಷಮ ಜಪ್ತ ಮಾಡುತ್ತೇವೆ. ಆ ಮೇಲೆ ಎಲ್ಲರೂ ಸಹಿ ಮಾಡಿ ನಿಮ್ಮ ನಿಮ್ಮ ಮನೆಗೆ ಹೋಗಿರಿ. ಕಂಠಿಯ ಹಾರವು ಕಮಲಾಬಾಯಿಯ ಹತ್ತರ ಇರುವ ಮೂಲಕ ಆಕೆಯನ್ನು ಕರಕೊಂಡು ಚಾವಡಿಗೆ ಹೋಗು ತ್ತೇವೆ, ಎಂದರು.

ಹವಾಲದಾರರ ಈ ಮಾತಿಗೆ ಖತಿಗೊಂಡು ಮಹಾದೇವಪ್ಪನವರು ಗಂಭೀರ ಸ್ವರದಿಂದ:—ಸುಳ್ಳು-ಸುಳ್ಳು, ಇದೆಲ್ಲ ಅತಿ ನಿಂದ್ಯವಾದ ಮೋಸ ಗಾರಿಕೆಯು. ಮುರಲೀಧರ-ಕಮಲಾಬಾಯಿಯರ ಸದ್ಗುಣಗಳ ಪೂರ್ಣ ಪರಿಚಯವು ನನಗಿರುತ್ತದೆ. ಅವರು ಸ್ವಪ್ನದಲ್ಲಿ ಕೂಡಾ ಇಂಥ ನೀಚ ಕೆಲಸಕ್ಕೆ ಮನಸ್ಸು ಮಾಡರು. ಅಂಥವರಿಗೆ ಈ ಆರೋಪವೇ? ಇಂದಿಗೆ ನಾಲ್ಕು ದಿವಸಗಳ ಪೂರ್ವದಲ್ಲಿ ನೀವೂ, ವಿನಾಯಕರಾಯರೂ ಬಂದು, ಮಾಡಬಾರದ ಅಸುರೀಕೃತಿಗಳಿಂದ ಮುರಲೀಧರನನ್ನು ನುಗ್ಗುಮಾಡಿ, ನಮ್ಮನೆಂದು ಸಾವಿರರೂಪಾಯಿಗಳನ್ನು ಒಯ್ದುದ್ದಲ್ಲದೆ, ಕಡಿನೆಯಾದ

ಇಪ್ಪತ್ತೈದು ರೂಪಾಯಿಗಳಲ್ಲಿ ಇದೇ ಕಂಠಿಯ ಹಾರವನ್ನು ಒಯ್ದಿರಂತೆ. ನಾನು ಅದೇ ದಿವಸ ಕೈಗಡವಾಗಿ ಕೊಟ್ಟ ಇಪ್ಪತ್ತೈದು ರೂಪಾಯಿಗಳನ್ನು ಮುರಲೀಧರನು ಅಣ್ಣನಿಗೆ ಕೊಟ್ಟರೂ, ಈ ರಾಯರು ಹಾರವನ್ನು ಕೊಡದೆ ಇಂದು ನಾಳೆ ಎಂದು ದಿನಹಾಕಹತ್ತಲು, ಆ ಬಡ ಪ್ರಾಣಿಯು ಉಪಾಯವಿಲ್ಲದೆ ಅತ್ತಿಗೆಯ ಮುಂದೆ ಸುಳ್ಳು ನೆವಹೇಳಿ, ಹಾರವನ್ನು ತಂದನು. ಇದರಲ್ಲಿ ಅವನ ತಪ್ಪೇನು? ಇಷ್ಟಾಗಿ ಮುರಲೀಧರನು ನಿನ್ನೆ ಸಂಜೆಯು ಐದು ಗಂಟೆಯಿಂದ ೯ ಗಂಟೆಯ ವರೆಗೆ ನಮ್ಮ ಮನೆಯಲ್ಲಿಯೇ ಇದ್ದನು. ಅಂದಮೇಲೆ ಮುರಲೀಧರನು ಆರು ಗಂಟೆಗೆ ಗೋಡೆಯನ್ನು ಹಾರಿ ಹೋದನೆಂದು ಸಾಕ್ಷೀ ಜವಾಬು ಕೊಟ್ಟ ಆ ನೀಚರು ಲಂಚದಾಶೆಗಾಗಿ ಸುಳ್ಳು ಹೇಳಿರಬೇಕು. ಇಂಥ ಲಂಚಪ್ರಿಯರಿಗೆ ಯಮಲೋಕದಲ್ಲಿ ಹೊಸ ನರಕಕುಂಡವನ್ನು ಸ್ಥಾಪಿಸುವದೇ ಸರಿ; ಆದರೆ ಹವಾಲದಾರ ಸಾಹೇಬರೇ, ನಿಮಗೆ ಕೈಮುಗಿದು ಹೇಳಿಕೊಳ್ಳುತ್ತೇನೆ. ಸದ್ಗುಣನಿಧಿಯಾದ ಮುರಲೀಧರ ಹಾಗು ಪತಿವ್ರತಾಶಿರೋಮಣಿ ಕಮಲಾಬಾಯಿಯವರ ಮರ್ಯಾದೆಗೆ ಕಲಂಕ ಹಚ್ಚಬೇಡಿರಿ; ನೀವು ಅನುಭವಿಕರಿರುತ್ತೀರಿ; ಮತ್ತು ಮುರಲೀಧರ-ವಿನಾಯಕರಾಯರ ದ್ವೇಷವು ಇದಕ್ಕೂ ಮೊದಲಿನದೆಂಬದು ನಿಮಗೆ ಗೊತ್ತಿರುತ್ತದೆ. ಇದರ ಮೇಲೆ ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ; ನಾನಂತೂ ಈ ಘಾತುಕತನದ ಪಂಚನಾಮೆಗೆ ಒಪ್ಪಿಕೊಂಡು, ಈ ಸಂಭಾವಿತರನ್ನು ಸಂಕಟಕ್ಕೀಡುಮಾಡಿ, ನನ್ನ ಮಾತಾಪಿತೃಗಳನ್ನು ನರಕಕ್ಕೆ ಕಳಿಸಲಾರೆನು, ಎಂದು ಹೇಳಿದರು.

ಈ ಭಾಷಣವನ್ನು ಕೇಳಿ, ಕುಳಿಂದಸ್ವಾಮಿಯವರು ಮುಂದುಗಾಣದೆ ಸುಮ್ಮನೆ ಕುಳಿತು ಬಿಟ್ಟರು; ಆದರೆ ಇದೆಲ್ಲವನ್ನು ಒಳಗಿನಿಂದಲೇ ಕೇಳುತಲಿದ್ದ ವಿನಾಯಕರಾಯರು ಆಗ ಹೊರಗೆ ಬಂದು, ಮಹಾದೇವಪ್ಪನವರನ್ನುದ್ದೇಶಿಸಿ:—ಯಾಕೆ ಮಹಾದೇವಪ್ಪನವರೇ, ಕಮಲಾ-ಮುರಲಿಯವರನ್ನು ಒಳ್ಳೇ ಹೊಗಳಿ ಮಾತನಾಡುವಿರಿ? ಈ ಕಳವಿನಲ್ಲಿ ನಿಮ್ಮ ಅಂಗವೂ ಇದ್ದಂತೆ ತೋರುತ್ತದೆ. ನಿಮ್ಮನ್ನೂ ಪೋಲೀಸರ ವಶಮಾಡಿಬಿಟ್ಟೇನು. ಎಚ್ಚರದಿಂದ ಮಾತಾಡಿರಿ! ಎಂದು ಕಣ್ಣುಕಿಸಿದು ಮಾತಾಡಿದರು; ಆದರೆ ಸತ್ಯವಾದಿಗಳಾದ ಮಹಾದೇವಪ್ಪನವರು ಇದಕ್ಕೆ ಅಂಜುವರೇ? ಅವರಿಗೆ ತಡೆಯಲಾರದಷ್ಟು ಸಿಟ್ಟು ಬಂದಿತು. ಆಗ ಅವರು ನಿಶ್ಚಯಸೂಚಕ

ಸ್ವರದಿಂದ:— ಹೌದು. ಇದರಲ್ಲಿ ನನ್ನದೂ ಅಂಗವಿರುತ್ತದೆ. ಯಾವ ಪೋಲೀಸನು ನನ್ನನ್ನು ತರಬುತ್ತಾನೋ ತರಬಲಿ. ಒಂದೇ ಹೊಟ್ಟೆಯಲ್ಲಿ ಹುಟ್ಟಿದ ತಮ್ಮಂದಿರನ್ನು ನೀಚತನದಿಂದ ಪೋಲೀಸರ ಕೈಯಲ್ಲಿ ಕೊಟ್ಟು, ಉತ್ತರಕುಮಾರನಂತೆ ನನ್ನ ಮುಂದೆ ಪೌರುಷಬಡಿಯುವಿರೇನು? ನಿಜ ಸಂಗತಿಯನ್ನು ಇದ್ದ ಹಾಗೆ ಹೇಳಿದರೆ, ಹೊಗಳಿದ ಹಾಗಾಯಿತಂತೆ. ಇಂಥ ಜಂಭವನ್ನು ಕಟ್ಟಿ ಇಡಿರಿ. ದಿಕ್ಕಿಲ್ಲದ ಈ ಬಡಪ್ರಾಣಿಗಳನ್ನು ನೀವು ಮನ ಬಂದಂತೆ ಘಾತಿಸುವಿರಲ್ಲವೆ? ಈ ಪಾಪವು ಎಂದಿಗೂ ಹುಸಿ ಹೋಗದು. ಹಡೆದ ತಾಯಿಯ ಒಂದು ಕಣ್ಣೀರಿನ ಹನಿಯೇ ನಿಮ್ಮನ್ನು ರೌರವ ನರಕಕ್ಕೆ ಕಳಿಸುವದು. ರಾಯರೇ, ಎಲ್ಲ ಆಸ್ತಿಗೂ ನಾನೇ ಬಾಧ್ಯಸ್ಥನಾಗಬೇಕೆಂದು ನಿಮ್ಮ ಕಾಂಕ್ಷೆಯಿದ್ದರೆ, ಹೇಳಿರಿ. ಈಗಲೇ ಆ ಆಸ್ತಿಯಲ್ಲಿ ನಮ್ಮ ಯಾವ ಹಕ್ಕೂ ಇಲ್ಲೆಂದು ಇವರಿಂದ ಬರೆಯಿಸಿಕೊಡುತ್ತೇನೆ. ಇನ್ನಾದರೂ ತಿಳಿದುನೋಡಿರಿ. ಅವರ ಮರ್ಯಾದೆಯು ಹೋದದ್ದು ಬೇರೆಯಲ್ಲ, ನಿಮ್ಮ ಮರ್ಯಾದೆ ಹೋದದ್ದು ಬೇರೆಯಲ್ಲ, ಎಂದು ನುಡಿದು, ಹವಾಲದಾರರ ಮುಖ ನೋಡಿದರು.

ಇಷ್ಟರಲ್ಲಿಯೇ ಕ್ರೋಧಸಂತಪ್ತರಾಗಿ ಕುಳಿತಿದ್ದ ಹವಾಲದಾರರು:— ಇದೆಲ್ಲ ವೇದಾಂತವನ್ನು ಹೇಳಲಿಕ್ಕೆ ನೀವಾರು? ಇಂಥ ಅಣ್ಣನ ಮನೆಯಲ್ಲಿ ಕಳವು ಮಾಡಿದವರಿಗೆ ತಕ್ಕ ಶಾಸನವನ್ನು ಮಾಡದೆ ಬಿಟ್ಟರೆ, ಹಗಲಿನಲ್ಲಿಯೇ ಧಾರವಾಡವು ಲೂಟಿಯಾಗಿ ಹೋದೀತು. ಪಂಚನಾಮೆಗೆ ಒಪ್ಪಿಕೊಂಡು ಸಹಿ ಮಾಡುವಂತಿದ್ದರೆ, ಇಲ್ಲಿ ಕುಳಿತುಕೊಳ್ಳಿರಿ. ಇಲ್ಲದಿದ್ದರೆ ನಿಮ್ಮ ಮೇಲೆಯೂ ಕೇಸುಮಾಡುವ ಪ್ರಸಂಗ ಬಂದೀತು. ತಿಳಿದು ನೋಡಿರಿ, ಎಂದು ಗರ್ಜಿಸಿದರು. ಈ ಗರ್ಜನೆಯಿಂದ ಮಹಾದೇವಪ್ಪನವರ ಸಮಾಧಾನವೃತ್ತಿಯಲ್ಲಿ ಸ್ವಲ್ಪೂ ಅಂತರವಾಗಲಿಲ್ಲ. ಅವರು ಮತ್ತಿಷ್ಟು ಗಂಭೀರಭಾವವನ್ನು ತಾಳಿ:—ಹವಾಲದಾರರೇ, ಎಲ್ಲ ಪೋಲೀಸರು ನಿಮ್ಮಂತೆಯೇ ಮೂರ್ಖರಿರುವದಿಲ್ಲ; ಮತ್ತು ಕೇಸುಮಾಡಿ ನನ್ನನ್ನು ಯಾವದಾದರೊಂದು ಶಿಕ್ಷೆಗೆ ಗುರಿಮಾಡುವಷ್ಟು ಅಧಿಕಾರವೂ ನಿಮ್ಮಲ್ಲಿಲ್ಲ. ಸುಮ್ಮನೆ ಯಾಕೆ ಬಡಬಡಿಸುವಿರಿ? ನಿಮ್ಮ ಕೇಸಿನ ಹೆದರಿಕೆಯು ನನಗೆ ಎಳ್ಳಷ್ಟೂ ಇಲ್ಲ; ಆದರೆ ವಂದ್ಯಳಾದ ಕಮಲಾದೇವಿಯ ಅಮರ್ಯಾದೆಯನ್ನು ಈ ಕಣ್ಣಿನಿಂದ ನೋಡಲಾರದೆ ನಾನು ಹೊರಟುಹೋಗುತ್ತೇನೆ.

ನಿಮ್ಮ ಇಚ್ಛೆಯಿದ್ದಂತೆ ಮಾಡಿಕೊಳ್ಳಿರಿ. ಉಳಿದ ಪಂಚರಿಗೆ ಪಾಪಪುಣ್ಯದ ವಿಚಾರವಿಲ್ಲದಿದ್ದಲ್ಲಿ ಅವರು ಒಪ್ಪಿಕೊಳ್ಳಲೊಲ್ಲರೇಕೆ. ನಾನಂತೂ ಅವರಿಗೆ ಸಹಿ ಮಾಡಬೇಡಿರೆಂದು ಕೈಮುಗಿದು ಸಾರಿ ಸಾರಿ ಹೇಳಿಕೊಳ್ಳುತ್ತೇನೆ; ಎಂದು ನುಡಿದು ತಟ್ಟನೆ ಹೋಗಿಬಿಟ್ಟರು!

ಪಂಚರ ಸಮಕ್ಷ ಮನೆಯನ್ನು ಜಪ್ತ ಮಾಡುವದಾಯಿತು. ಏನೂ ದೊರೆಯಲಿಲ್ಲ. ಪಂಚರಿಗೆ ಏನೇನೋ ತಿಳಿಹೇಳಿ, ಪಂಚನಾಮೆಗೆ ಸಹಿ ಮಾಡಿಸಿಕೊಳ್ಳುವದೂ ಆಯಿತು. ಆ ಮೇಲೆ ಕುಳಿಂದ ಸ್ವಾಮಿಯವರು ಕಮಲಾಬಾಯಿಗೆ:—ಕಮಲಾಬಾಯೀ, ಒಳ್ಳೆಯ ಮಾತಿನಿಂದ ಉಳಿದ ದಾಗೀನೆ-ರೂಪಾಯಿಗಳನ್ನು ಕೊಟ್ಟು, ಮುರಲೀಧರನಿರುವ ಜಾಗೆಯನ್ನು ಹೇಳು; ಅಂದರೆ ನಿನ್ನನ್ನು ಬಿಟ್ಟು ಹೋಗುತ್ತೇನೆ; ಇಲ್ಲದಿದ್ದರೆ, ರಟ್ಟೆಗೆ ಹಗ್ಗಹಚ್ಚಿ ಚಾವಡಿಗೆ ಎಳೆದೊಯ್ಯುವ ಪ್ರಸಂಗಬರುವದು ನೋಡು; ಎಂದು ಅಧಿಕಾರಯುಕ್ತ ಸ್ವರದಿಂದ ನುಡಿದರು. ಅದಕ್ಕೆ ಕಮಲಾಬಾಯಿಯು:—ದಾಗೀನೆ-ರೂಪಾಯಿಗಳನ್ನು ಕಣ್ಣಿನಿಂದ ನೋಡದ ನಾನು ಎಲ್ಲಿಂದ ಕೊಡಲಿ? ಮತ್ತು ಮುರಲೀಧರನನ್ನಂತೂ ನಾನು ಎಲ್ಲಿಗೂ ಕಳಿಸಿಲ್ಲ. ನೀವು ಬೇಕಾದದ್ದು ಮಾಡಿರಿ, ಬೇಕಾದಲ್ಲಿ ಒಯ್ಯಿರಿ, ಹಾಲು ಇದ್ದದ್ದು ಹಾಲೇ ಆಗುವದಲ್ಲದೆ, ನೀರು ಬೇರೆ ಆಗಲಿಕ್ಕಿಲ್ಲ; ಎಂದು ಹೇಳಿದಳು.

ಆ ಮೇಲೆ ವಿನಾಯಕರಾಯರು ಹವಾಲದಾರರನ್ನು ಕುರಿತು:—ಹಗಲೆಲ್ಲ ಏನು ಕೇಳುವಿರಿ? ರಟ್ಟೆಗೆ ಹಗ್ಗ ಹಚ್ಚಿಸಿರಿ. ಹೊತ್ತಾಯಿತು, ಎಂದು ಆತ್ಯುರತೆಯಿಂದ ಹೇಳಿ, ಪೋಲೀಸರಿಗೆ ಸಂಜ್ಞೆಮಾಡಿದರು. ಇದನ್ನು ನೋಡಿ, ಕೋಮಲಾಂತಃಕರಣದ ಕಮಲಾಬಾಯಿಯು ಅನಿವಾರ ದುಃಖಗೊಂಡಳು. ಅವಳ ತೇಜಃಪುಂಜವಾದ ನೇತ್ರಗಳು ಅಶ್ರುಪೂರ್ಣವಾದವಲ್ಲದೆ, ಹವಳದಂತಿರುವ ಕೆಳದುಟಿಯು ಕಂಪಿಸಹತ್ತಿತು. ಆ ಇಂದುಮುಖಿಯು ವಿನಾಯಕರಾಯರ ಸಮೀಪಕ್ಕೆ ಬಂದು, ಗದ್ಗದಸ್ವರದಿಂದ:—ವಿನಾಯಕರಾಯರೇ! ನಿಮಗೆ ನಮಸ್ಕಾರ ಮಾಡುತ್ತೇನೆ. ನನ್ನ ಮರ್ಯಾದೆಯನ್ನು ಕಾಪಾಡಿಕೊಳ್ಳಿರಿ. ನಿಮ್ಮ ಎರಡು ಸಾವಿರ ರೂಪಾಯಿಗಳು ಕಳವಾಗಿ ಹೋಗಿದ್ದರೆ, ತಂದೆಯವರ ಕಡೆಯಿಂದ ನಾಳೆಯೇ ತರಿಸಿಕೊಡುತ್ತೇನೆ. ಬಿಟ್ಟು ಬಿಡಿರಿ. ಪರಪುರುಷರ ಸ್ಪರ್ಶ

ಏಲ್ಲದ ನನ್ನನ್ನು ಪೋಲೀಸರ ಕೈಯಲ್ಲಿ ಕೊಟ್ಟು, ಘಾಸಿಮಾಡಬೇಡಿರಿ. ಇನ್ನಾದರೂ ನಿಮ್ಮ ಆಸುರೀಕಾಂಕ್ಷೆಯು ಶಾಂತವಾಗದಿದ್ದಲ್ಲಿ, ಮೂವರೂ ನಿಮ್ಮ ಮುಂದೆ ನಿಂತಿದ್ದೇವೆ ಪೋಲೀಸರ ನಡದೊಳಗಿನ ಬಾಕಿನಿಂದ ನಮ್ಮನ್ನು ಇರಿದು ಕೊಂದುಬಿಡಿರಿ; ಅಂದರೆ, ನಿಮ್ಮ ಸೌಖ್ಯಭೋಗದ ಕಂಟಕವು ಬಯಲಾಗಿ ಹೋಗುವದು. ರಾಯರೇ! ಅಣ್ಣನ ಹೆಂಡತಿ ಯೆಂಬ ಅಭಿಮಾನವು ನಿಮಗೆ ಸ್ವಲ್ಪೂ ಇಲ್ಲದಾಯಿತೇ! ನನ್ನ ಅಮರ್ಯಾದೆಯನ್ನು ಮಾಡಿಸಿದರೆ, ನಿಮಗೆ ಬರುವ ಪೌರುಷವಾದರೂ ಏನು? ಇಕೋ, ನಿಮ್ಮ ಮುಂದೆ ನಿಂತಿದ್ದೇನೆ. ಅತ್ತಿಗೆಯ ರಕ್ಷಣೆಯನ್ನಾದರೂ ಮಾಡಿರಿ-ಇಲ್ಲವೆ ಪೋಲೀಸರ ವಶಮಾಡಿ, ಶಾಶ್ವತ ಕೀರ್ತಿಯನ್ನಾದರೂ ಪಡೆಯಿರಿ; ಎಂದು ನುಡಿದು ಆಶಾಜನಕ ದೃಷ್ಟಿಯಿಂದ ವಿನಾಯಕರಾಯರ ಮುಖವನ್ನು ನೋಡಹತ್ತಿದಳು.

ವಾಚಕ ಮಹಾಶಯರೇ ಕಮಲಾಬಾಯಿಯ ಆಗಿನ ಸ್ಥಿತಿಯನ್ನು ನೋಡಿದರೆ, ಎಂಥ ಕಲ್ಲೆದೆಯ ಕಟುಕನಾದರೂ ಕನಿಕರಪಡದೆ ಇರುತ್ತಿದ್ದಿಲ್ಲ; ಆದರೂ ಆ ದುಷ್ಟ ವಿನಾಯಕರಾಯರಿಗೆ ದಯಬರಲಿಲ್ಲ. ಅವರು ಗೆಹಗೆಹಿಸಿ ನಗುತ್ತ:—ಹ್ಯಾಗೆದೆ? ಕಮಲೀ, ನಿಮ್ಮ ಶ್ರಾದ್ಧವು ಇಷ್ಟಕ್ಕೇ ಮುಗಿಯುವದಿಲ್ಲ. ಇನ್ನೂ ಮುಂದೆ ಅದೆ. ನಿಮ್ಮಿಬ್ಬರನ್ನು ವಿಜಾಪೂರ ಜೇಲಿಗೆ ಕಳಿಸಿದರೇನೇ ನನ್ನ ಸಿಟ್ಟು ಶಾಂತವಾಗುವದಲ್ಲದೆ, ಅಲ್ಲಿಯವರೆಗೆ ಆಗಲಾರದು; ಎಂದು ನುಡಿದು, ಪೋಲೀಸರನ್ನು ನೋಡಲು, ಇಬ್ಬರು ಪೋಲೀಸರು ಮುಂದೆ ಬಂದು, ಕಮಲಾಬಾಯಿಯ ತುಂಬಿದ ತೋಳುಗಳಿಗೆ ಹಗ್ಗ ಕಟ್ಟಹತ್ತಿದರು.

ಪರಪುರುಷನ ಸೋಂಕಿಗೆ ಅಳುಕಿ, ಅಂಜಿಕೊಂಡು ಕಮಲಾಬಾಯಿಯು ಥರ ಥರ ನಡುಗಹತ್ತಿದಳು. ಮುಖವು ಆರಕ್ತವಾಯಿತು. ನಯನವಾರಿಗಳು ಅವಳ ಗುಲಾಬೀವರ್ಣದ ಸುಂದರವಾದ ಗಲ್ಲಗಳ ಮೇಲೆ ಧಾರಾಳವಾಗಿ ಇಳಿಯಹತ್ತಿದವು. ಈಗ ಮಾತ್ರ ಅವಳು ಬಿಡುಗಡೆಯ ಆಶೆದೊರೆದು, ವಿನಾಯಕರಾಯನನ್ನುದ್ದೇಶಿಸಿ ಕೋಪಮಿಶ್ರಿತ ಗದ್ಗದ ಸ್ವರದಿಂದ:—ಘಾತಕಿಯಾದ ವಿನಾಯಕಾ! ಈಗಾದರೂ ನಿನ್ನ ರಾಕ್ಷಸೀ ಕಾಂಕ್ಷೆಯು ಶಾಂತವಾಯಿತೇ? ಈ ಸ್ವಜನಘಾತುಕತನದ ಪಾಪವು ನಿನ್ನನ್ನು ಜನ್ಮಜನ್ಮಾಂತರಗಳಲ್ಲಿಯೂ ಬಾಧಿಸದೆ ಬಿಡಲಾರದು, ವಂಚಕಾ!

ಈಗ ನೀನು ಯಾರ ಮೇಲೆ ಈ ಕಪಟಶಸ್ತ್ರವನ್ನೆತ್ತಿರುವೆಯೆಂಬದನ್ನು ತಿಳಿದಿರುವೆಯಾ? ಒಂಬತ್ತು ತಿಂಗಳುಗಳ ವರೆಗೆ ನಿನ್ನನ್ನು ಹೊತ್ತುಕೊಂಡು, ಜರ್ಜರಳಾಗಿ, ಜನ್ಮಕೊಟ್ಟ ತಾಯಿಯನ್ನು ನಿಂದಿಸುವ ಕಟುಕನೇ!! ಲಂಚಕ್ಕೆ ಮರುಳಾದ ಈ ಹವಾಲದಾರರೊಬ್ಬರು ನಿನಗನುಕೂಲವಿದ್ದರೆ, ಇಡೀ ಸರಕಾರವೆಲ್ಲ ಲಂಚಪ್ರಿಯವಾಗಿ ನಿನಗನುಕೂಲವಾಗಲಾರದು. ಹಿಂದುವೇಳೆ ಕಲಿಪ್ರಭಾವದಿಂದಲೂ, ದುರ್ದೈವದಿಂದಲೂ ನನಗೆ ಶಿಕ್ಷೆಯಾದರೂ ಆಗಲಿ; ಆದರೆ ಪರಲೋಕದಲ್ಲಿ ನಿನಗೆ ಯಾವ ತರದ ಶಿಕ್ಷೆಯಾಗುವದೆಂಬದನ್ನು ತಿಳಿದುನೋಡು. ದ್ರವ್ಯದಾಶೆಯಿಂದ ಅಂಧನಾದ ನಿನಗೆ ಯಮಲೋಕದಲ್ಲಿ ನಿನಗಾಗುವ ಶಿಕ್ಷೆಯ ಭಯಂಕರ ಚಿತ್ರವು ಕಾಣದಿದ್ದರೂ, ನನಗೆ ಅದು ಸ್ಪಷ್ಟವಾಗಿ ಕಾಣುತ್ತದೆ. ಈ ಎಲ್ಲ ಮಾತುಗಳು ನಿರರ್ಥಕವಾದವುಗಳೆಂದು ನೀನು ತಿಳಿದಿರಬಹುದು; ಆದರೆ ಹುಟ್ಟಿದಾರಭ್ಯ ವ್ರತಸ್ಥಳಾದ ನನ್ನ ಈ ಮಾತುಗಳು ವ್ಯರ್ಥವಾಗವೆಂದು ತಿಳಿ. ಇರಲಿ. ಇನ್ನು ಹೆಚ್ಚಿಗೆ ಮಾತಾಡಿ ಪ್ರಯೋಜನವಿಲ್ಲ. ಹವಾಲದಾರ ಸಾಹೇಬರೇ, ಬೇಡಿಗಳನ್ನು ಮರೆತು ಬಂದಿರೇನು? ಅವನ್ನಿಷ್ಟು ಈ ನಿರ್ಭಾಗ್ಯಳಿಗೆ ತೊಡಿಸಿದ್ದರೆ, ಈ ಸ್ವಜನದ್ರೋಹಿಯು ನೋಡಿ, ನಲಿದಾಡುತ್ತಿದ್ದನು. ನ್ಯಾಯಾನ್ಯಾಯ ವಿಚಾರಮಾಡದೆ ದ್ರವ್ಯದಾಶೆಯಿಂದ ನಿರಪರಾಧಿಗಳನ್ನು ಗೋಳಿಡಿಸುವ ನಿಮಗೆ ಧಿಃಕಾರವಿರಲಿ!(ಸ್ವಲ್ಪ ಸಮಾಧಾನತಾಳಿ)ಹವಾಲದಾರರೇ, ಹಗ್ಗವನ್ನು ಕಟ್ಟುವದಾಯಿತು. ಏಳಿರಿ, ನೀವು ಕರೆದಲ್ಲಿ ಬರಲಿಕ್ಕೆ ಸಿದ್ಧಳಿದ್ದೇನೆ. ಓಹೋ!! ಮರತೆ. ಸಾಹೇಬರೇ, ಸ್ವಲ್ಪ ಒಳಗೆ ಹೋಗಿ ಬರುತ್ತೇನೆ. ಅಪ್ಪಣೆ ಕೊಡಿರಿ, ಎಂದು ನುಡಿದವಳೇ, ಕೋಮಲವಾದ ಬಾಹುಗಳಿಗೆ ಕಟ್ಟಿದ ಹಗ್ಗವು ಜೋತಾಡುತ್ತಿರಲು, ಅಡಿಗೆಯ ಮನೆಯ ಬಾಗಿಲಲ್ಲಿ ಶೋಕಿಸುತ್ತ ಕುಳಿತುಕೊಂಡಿದ್ದ ಸೀತವ್ವನ ಬಳಿಗೆ ಬಂದು, ಅವಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ:—ನನ್ನ ಪೂಜ್ಯ ಅತ್ತೆಯವರೇ! ಈ ಪಾಪಿಯ ಕಡೆಯ ನಮಸ್ಕಾರವನ್ನು ಸ್ವೀಕರಿಸಿರಿ! ಈ ಮಾಯಾಜಾಲದೊಳಗಿಂದ ಕಲಂಕವಿಲ್ಲದೆ ಪಾರಾಗಿ ಬರುವಂತೆ ಆಶೀರ್ವದಿಸಿರಿ!! ನಿಮ್ಮ ಮಂಗಲಾಶೀರ್ವಾದವು ಎಂಥ ದುರ್ಧರ ಪ್ರಸಂಗದಲ್ಲಿಯಾದರೂ ನನ್ನ ಮರ್ಯಾದೆಯ ರಕ್ಷಣೆ ಮಾಡುವದು. ಅವ್ವಾ! ಹೋಗಿ ಬರುವೆನು. ಚಿಂತಿಸದೆ ಅಪ್ಪಣೆ ಕೊಡಿರಿ, ಎಂದು ನುಡಿದು ಮತ್ತೊಮ್ಮೆ ಆ ಸಾಧ್ವಿಯ

ಪಾದಕ್ಕೆರಗಿ, ಹಾಗೆಯೇ ನಡುಮನೆಯಲ್ಲಿರುವ ಖೋಲಿಗೆ ಬಂದಳು. ಅಲ್ಲಿ ತನ್ನ ಪೆಟ್ಟಿಗೆಯೊಳಗಿಂದ ಯಾವುದೋ ಒಂದು ವಸ್ತುವನ್ನು ಹೊರಗೆ ತೆಗೆದು, ಮುದ್ದಿಟ್ಟು, ಸೀರೆಯನ್ನು ಬಚ್ಚಿಟ್ಟುಕೊಂಡು ಹೊರಬಿದ್ದಳು. ಅಷ್ಟರಲ್ಲಿ ಪೋಲೀಸರೂ ಸಿದ್ಧರಾಗಿ ನಿಂತಿದ್ದರಿಂದ ಕಮಲಾಬಾಯಿಯು, ಸೀತಾಬಾಯಿ-ಮಕರಂದರು ಗೋಳಿಟ್ಟು ಅಳುತ್ತಿರಲು, ಪೋಲೀಸರ ಸಂಗಡ ಹೋಗಿಬಿಟ್ಟಳು!

ವಿನಾಯಕರಾವ ಮತ್ತು ಹವಾಲದಾರರು, ಕಮಲಾಬಾಯಿಗೆ ಅನೇಕ ಬಗೆಯ ಮರ್ಮಭೇದಕ ಮಾತುಗಳನ್ನಾಡುತ್ತಲೂ, ಮಾರ್ಗದಲ್ಲಿ ಭೆಟ್ಟಿಯಾದ ಗುರುತಿನ ಗೃಹಸ್ಥರ ಮುಂದೆ ಕಳವಿನ ಸಂಗತಿಯನ್ನು ಉಪ್ಪು ಕಾರಹಚ್ಚಿ ಮನೋರಂಜಕವಾಗುವಂತೆ ಹೇಳುತ್ತಲೂ ನಡೆದರು. ಇವರ ಮನೋರಂಜಕ ಮಾತುಗಳಿಗೆ ಮರುಳಾದವರು ಕಮಲಾಬಾಯಿಯನ್ನೂ, ಮರುಳಾಗದ ಸದ್ಗೃಹಸ್ಥರು ವಿನಾಯಕರಾಯರನ್ನೂ ಹಳಿಯುತ್ತಿದ್ದರು. ಲಾಂಗೂಲಚಾಲನ ವೃತ್ತಿಯ ಅಧಮರಂತೂ ವಿನಾಯಕರಾಯರ ಸ್ತುತಿ ಮಾಡುತ್ತ ಬೆನ್ನಹತ್ತಿದರು. ಇಷ್ಟು ಸ್ತುತಿಯಿಂದಲೂ ವಿನಾಯಕರಾಯರಿಗೆ ತೃಪ್ತಿಯಾದಂತೆ ತೋರಲಿಲ್ಲ; ಪತ್ನಿಯ ಕಡೆಯಿಂದಷ್ಟು ಕೊಂಡಾಡಿಸಿಕೊಂಡರೆ ತನ್ನ ಕುಟಿಲತಂತ್ರದ ಸಾರ್ಥಕವಾಗುವದೆಂಬ ಉದ್ದೇಶದಿಂದ ಲೈನಬಾಜಾರದಿಂದ ಜನದಟ್ಟಣೆಯು ವಿಶೇಷವಿರುವ ಮಾರ್ಕೇಟಿನ ರಸ್ತೆಯಿಂದ ತಮ್ಮ ಮನೆಗೆ ಬಂದರು. ಆಗ್ಗೆ ಬಾಗಿಲಲ್ಲಿ ಹುನಪಿನಿಂದ ನಿಂತುಕೊಂಡಿದ್ದ ನೀಲಗಂಗಾಬಾಯಿಯು ಕಮಲಾಬಾಯಿಯ ಈ ಹೃದಯದ್ರಾವಕ ಸ್ಥಿತಿಯನ್ನು ನೋಡಿ ಸಂತೋಷದಿಂದ:—ಕಮಲೀ, ನಾನೊಳ್ಳೇ ಪತಿವ್ರತೆಯೆಂದು ಪರಪುರುಷರ ಕಡೆಯಿಂದ ಮುಟ್ಟಿಸಿಕೊಳ್ಳದ ನೀನು, ಈಗ ಹೇಗೆ ಮುಟ್ಟಿಸಿಕೊಂಡಿರುವೆ? ಮಾರಿಗೆ ಬಲಿ ಕೊಡುವದಕ್ಕಾಗಿ ಕುರಿಯನ್ನು ಒಯ್ಯುವಂತೆ ನಿನ್ನನ್ನು ಹಗ್ಗದಿಂದ ಕಟ್ಟಿ ಒಯ್ಯುತ್ತಿರುವರಲ್ಲಾ? ನಿನ್ನ ಮಡಿ ಮೈಲಿಗೆಗಳೆಲ್ಲ ಎಲ್ಲಿ ಅಡಗಿದವು? ಇಷ್ಟಕ್ಕೇ ನಿನ್ನ ಪೂಜೆಯು ಮುಗಿಯಿತೆಂದು ತಿಳಿಯಬೇಡ; ನೂರಾರುಮಂದಿ ಪೋಲೀಸರಿಗೆಲ್ಲ ನಿನ್ನ ಪಾತಿವ್ರತ್ಯವನ್ನು ಹಂಚಿಕೊಡಬೇಕಾಗುವದು. ಹೋಗು, ಎಂದು ಕಮಲಾಬಾಯಿಗೆ ಕೇಳುವಂತೆ ಹಂಗಿಸಿದಳು. ದುಃಖದಿಂದ ಜರ್ಜರಳಾಗಿದ್ದ ಕಮಲಾಬಾಯಿಯು ಈ ಹೇಸಿಮಾತುಗಳನ್ನು ಕೇಳಿ, ನೀಲಗಂಗಾಬಾಯಿ

ಯನ್ನು ತಿರಸ್ಕಾರಮುದ್ರೆಯಿಂದ ನೋಡಿದಳು ಮಾತ್ರ.

ಸ್ವಲ್ಪ ಹೊತ್ತಿನಲ್ಲಿ ಎಲ್ಲರೂ ಪೋಲೀಸಚಾವಡಿಗೆ ಬಂದು ಮುಟ್ಟಿದರು. ಕುಳಿಂದ ಸ್ವಾಮಿಯವರು ಕಮಲಾಬಾಯಿಗೆ ಕಟ್ಟಿದ ಹಗ್ಗವನ್ನು ಯಾವ ಕಾರಣದಿಂದಲೋ ಉಚ್ಚಿಬಿಟ್ಟಿದ್ದರು. ಚಾವಡಿಯ ಮಧ್ಯಭಾಗದಲ್ಲಿ ಯುರೋಪಿಯನ್ ಪೋಷಾಕಿನಿಂದ ವಿರಾಜಿಸುತ್ತ ಖುರ್ಚಿಯ ಮೇಲೆ ಕುಳಿತುಕೊಂಡಿದ್ದ ಸಬ್ ಇನಸ್ಪೇಕ್ಟರ ಸಾಹೇಬರಿಗೆ ಎಲ್ಲರೂ ದರ್ಬಾರಿಯ ಶಿಸ್ತಿನಿಂದ ನಮಸ್ಕಾರ ಮಾಡಿದರು. ಕಮಲಾಬಾಯಿಯೂ ಕುಲಾಂಗನೆಯರಿಗುಚಿತವಾದ ಮರ್ಯಾದೆಯಿಂದ ನಮಸ್ಕಾರ ಮಾಡಿ, ಒಂದು ಕಡೆಗೆ ಹುಗಿದುಕೊಂಡು ನಿಂತಳು. ಇನಸ್ಪೆಕ್ಟರರು ಎಲ್ಲರ ನಮಸ್ಕಾರಗಳನ್ನು ಸ್ವೀಕರಿಸಿ ಹವಾಲದಾರರನ್ನು ಉದ್ದೇಶಿಸಿ:—ಕುಳಿಂದ ಸ್ವಾಮಿಾ, ಯಃಕಶ್ಚಿತ ಕೆಲಸಕ್ಕೆ ಇಷ್ಟು ತಡವೇಕಾಯಿತು? ಗುನ್ಹೆಗಾರರನ್ನು ಹಿಡಿದುಕೊಂಡು ಬರಬೇಕೆಂದು ಹೇಳಿ ಕಳಿಸಿರಲು, ಈ ಪ್ರಾಯದ ಸ್ತ್ರೀಯನ್ನೇಕೆ ಕರೆದುಕೊಂಡು ಬಂದಿರಿ? ಈ ತರುಣಿಗೂ, ಗುನ್ಹೆಗೂ ಸಂಬಂಧವೇನು? ಈ ಸ್ತ್ರೀಯಳಿಗೇನಾದರೂ ಅಮರ್ಯಾದೆಯನ್ನು ಮಾಡಿದಿರೇನು? ಎಂದು ಅಧಿಕಾರಯುಕ್ತ ಸ್ವರದಿಂದ ಕೇಳಿದರು. ಹವಾಲದಾರರು ಮತ್ತೊಮ್ಮೆ ನೆಲಮುಟ್ಟಿ ಮುಜುರೆಮಾಡಿ, ನಮ್ರಸ್ವರದಿಂದ:—ರಾವಸಾಹೇಬ, ಈ ಗುನ್ಹೆಗೆ ಇವಳೇ ಮೂಲಕಾರಣಳು. ನಾವು ಜಪ್ತಿ ಮಾಡಲಿಕ್ಕೆ ಇವರ ಮನೆಗೆ ಹೋಗುವ ಪೂರ್ವದಲ್ಲಿಯೇ ಗುನ್ಹೆಗಾರನಾದ ಮುರಲಿಯನ್ನು ಫಿತೂರಿಯಿಂದ ಎಲ್ಲಿಯೋ ಓಡಿಸಿ, ಕೊರಳೊಳಗಿನ ಕಂಠಿಯ ಹಾರದ ಹೊರ್ತಾಗಿ ಉಳಿದ ಎಲ್ಲ ಮಾಲನ್ನೂ ಬಚ್ಚಿಟ್ಟಿರುವಳು. ಇಷ್ಟಾದರೂ ಇವಳಿಗೆ ನಾವು ಸ್ವಲ್ಪೂ ಅಮರ್ಯಾದೆಯನ್ನು ಮಾಡಿಲ್ಲ.

ಇನಸ್ಪೆಕ್ಟರರು (ಆಶ್ಚರ್ಯದಿಂದ):—ಗುನ್ಹೇಗಾರನು ಫರಾರಿಯಾಗಿರುವನೇ?

ಹವಾಲದಾರರು:—ಹೌದು ರಾವಸಾಹೇಬ, ಈ ಕಮಲಾಬಾಯಿಯೇ ಫರಾರಿ ಮಾಡಿಸಿರುವಳು. ಕಳವಿನ ಕಂಠಿಯಹಾರವು ಕೊರಳಲ್ಲಿ ಇದ್ದರೂ, ಈ ಕಳವಿನ ವಿಷಯಕ್ಕೂ ಮತ್ತು ಉಳಿದ ಮಾಲಿನ ವಿಷಯಕ್ಕೂ ನನಗೆ ಏನೂ ಗೊತ್ತಿಲ್ಲವೆಂದು ಹೇಳುತ್ತಾಳೆ ಜಬರಿಸಿ ಕೇಳಿದರೆ ತಿರುಗಿ ಬಾಯಿಗೆ ಬಂದಂತೆ ಇಡೀ ಪೋಲೀಸಖಾತೆಯನ್ನೇ ನಿಂದಿಸುತ್ತಾಳೆ.

ಇನಸ್ಪೆಕ್ಟರರು:—ಮಾಸಿಕಪುಸ್ತಕಗಳಲ್ಲಿ ಉತ್ತಮೋತ್ತಮ ನೀತಿಯ ಲೇಖಗಳನ್ನು ಕೊಡುವ "ಕಮಲಾಬಾಯಿ ಕುಲಕರ್ಣಿ" ಅಂದರೆ ಇವರೇ ಏನು? ಎಂದು ಕಮಲಾಬಾಯಿಯ ಕಡೆಗೆ ಮುಖತಿರುವಿ ಕೇಳಿದರು. ಅದಕ್ಕೆ ಕಮಲಾಬಾಯಿಯು ವಿನಯಸ್ವರದಿಂದ:—ಹೌದು, ಮಹಾತ್ಮರೇ, ನಾನೇ ಆ ಹತಭಾಗ್ಯಳು.

ಇನಸ್ಪೆಕ್ಟರರು:—ಹೀಗೇನು? ಕಮಲಾಬಾಯಿ, ಕುಳಿತುಕೊಳ್ಳಮ್ಮಾ. ನಿನ್ನ ಹತ್ತಿರ ಈ ಕಂಠೀಹಾರವು ದೊರೆತ ಮೇಲೆ ಈ ಕಳವಿನ ಬಗ್ಗೆ ನಿನಗೆ ಎಲ್ಲ ಸಂಗತಿಯೂ ಗೊತ್ತಿರಬಹುದಲ್ಲವೇ?

ಕಮಲಾಬಾಯಿ:—ಈ ಕಂಠಿಯಹಾರವು ಕಳವಿನದಲ್ಲ; ನನ್ನದು.

ಇನಸ್ಪೆಕ್ಟರರು:—ಏನಂದಿ? ಹಾರವು ನಿನ್ನದೆ! ಅದು ಹ್ಯಾಗೆ?

ಕಮಲಾಬಾಯಿ:—ಹ್ಯಾಗೆಂದರೆ, ಈ ಕಂಠಿಯಹಾರವನ್ನು ನಾಲ್ಕೈದು ದಿವಸಗಳ ಹಿಂದೆ ಈ ವಿನಾಯಕರಾಯರು, ನಾವು ಕೊಡಬೇಕಾಗಿದ್ದ ಇಪ್ಪತ್ತೈದು ರೂಪಾಯಿಗಳ ಬದಲು ಒಯ್ದಿದ್ದರು. ನಿನ್ನಿನ ದಿವಸ ಎಲ್ಲ ರೂಪಾಯಿಗಳನ್ನು ಕೊಟ್ಟು, ಮುರಲೀಧರನು ತೆಗೆದುಕೊಂಡು ಬಂದಿದ್ದಾನೆ.

ಇನಸ್ಪೆಕ್ಟರರು:—ಇದು ನಿಜವೇ? ಎಂದು ನುಡಿದು, ವಿನಾಯಕರಾಯರ ಮುಖವನ್ನು ತೀಕ್ಷ್ಣದೃಷ್ಟಿಯಿಂದ ನೋಡಿದರು. ಅದಕ್ಕೆ ವಿನಾಯಕರಾಯರು ಗಾಬರಿಯ ಮುದ್ರೆಯಿಂದ:-ಇನಸ್ಪೆಕ್ಟರಸಾಹೇಬರೇ, ಕಮಲಾಬಾಯಿಯು ಸುಳ್ಳು ಹೇಳುತ್ತಾಳೆ. ಆರು ತಿಂಗಳ ಹಿಂದೆಯೇ ಇದನ್ನು ನನ್ನಲ್ಲಿ ನೂರು ರೂಪಾಯಿಗೆ ಒತ್ತೀ ಇಟ್ಟಿದ್ದರು. ರೂಪಾಯಿಗಳನ್ನು ಕೊಟ್ಟಿರುವದಿಲ್ಲ. ತಮಗೆ ಇದರಂತೆ ಲೆಕ್ಕ ತೋರಿಸುತ್ತೇನೆ.

ಇನಸ್ಪೆಕ್ಟರರು:—ಎಲಾ, ಇದೆಂಥ ಗೊಂದಲವು! ಕಮಲಾಬಾಯಿಯು ನಾಲ್ಕು ದಿವಸಗಳ ಕೆಳಗೆ ಇಪ್ಪತ್ತೈದು ರೂಪಾಯಿಗಳಿಗೆ ಅಡವು ಇಟ್ಟಿತ್ತೆಂದು ಹೇಳುವಳು. ನೀವು ಆರುತಿಂಗಳ ಹಿಂದೆಯೇ ನೂರು ರೂಪಾಯಿಗಳಿಗೆ ಇಟ್ಟಿದ್ದರೆಂದು ಹೇಳುವಿರಿ. ಇದರಲ್ಲಿ ಯಾವದನ್ನು ನಂಬಬೇಕು? ವಿನಾಯಕರಾಯರೇ, ನಿಜಹೇಳಿರಿ ಖಾತೆ-ಕಿರ್ದಿಗಳನ್ನು ಇಲ್ಲಿಯವರೆಗೆ ತರುವ ಪ್ರಸಂಗವನ್ನು ತಂದುಕೊಳ್ಳಬೇಡಿರಿ.

ವಿನಾಯಕರಾಯರು:—ಇಲ್ಲ ಸ್ವಾಮಿ; ನಾನು ಸುಳ್ಳು ಹೇಳುವ

ದಿಲ್ಲ; ಈಗಲೇ ತಾವು ಜಮಾಖರ್ಚಿನ ಪುಸ್ತಕಗಳನ್ನು ತರಿಸಿ ನೋಡಿಕೊಳ್ಳ ಬಹುದು. ನಮ್ಮದೇ ನಮಗೆ ದಕ್ಕದಿರಲು, ಪರರ ದುಡ್ಡಿಗೇಕೆ ಆಶೆ ಮಾಡಲಿ?

ಮಾನಧನಳಾದ ಆ ಮುಗ್ಧ ಕಮಲಾಬಾಯಿಯು ಹೆಚ್ಚಿಗೆ ಮಾತಾ ಡಲಿಲ್ಲ ಸಬ್‌ಇನಸ್ಪೆಕ್ಟರರು ಒಬ್ಬ ಸಿಪಾಯಿಯನ್ನು ಓಡಿಸಿ ವಿನಾಯಕ ರಾಯರ ಕಾರಕೂನನನ್ನೂ, ಜಮಾಖರ್ಚಿನ ಪುಸ್ತಕಗಳನ್ನೂ ತರಿಸಿದರು. ವಿನಾಯಕರಾಯರಂದಂತೆ ಅದರಲ್ಲಿ ಸಾಲದ ನೂರು ರೂಪಾಯಿಗಳನ್ನು ಜಮೆಯಲ್ಲಿ ಬರಕೊಂಡಿದ್ದಿಲ್ಲ. ಕೆಲ ಹೊತ್ತಿನವರೆಗೆ ಜಮಾಖರ್ಚನ್ನು ಚನ್ನಾಗಿ ಶೋಧಿಸಿ ನೋಡಿ ಇನಸ್ಪೆಕ್ಟರರು ಕಮಲಾಬಾಯಿಯನ್ನು ಕುರಿತು:—ಕಮಲಾಬಾಯೀ, ಆರುತಿಂಗಳ ಹಿಂದೆಯೇ ನೂರು ರೂಪಾಯಿ ಗಳಿಗೆ ಅಡವು ಇಟ್ಟರುವಿರೆಂದು ಇದರಲ್ಲಿ ಬರೆದಿರುವದಲ್ಲಾ; ಆದರೂ ಚಿಂತೆಯಿಲ್ಲ. ಇದರಲ್ಲಿ ವಿನಾಯಕರಾಯರೇ ಮೋಸಗಾರಿಕೆಯನ್ನು ಮಾಡಿರುವರೆಂದು ನಂಬುವಾ; ಆದರೆ, ಮುರಲಿಯು ಕಳವು ಮಾಡದಿದ್ದರೆ ಫರಾರಿ ಯಾಕೆ ಆಗಿರುವನು? ಮತ್ತು ಅವನು ವಿನಾಯಕರಾಯರ ಹಿತ್ತಲ ಗೋಡೆಯನ್ನು ಜಿಗಿದು ಹೋಗುವದನ್ನು ಅನೇಕರು ನೋಡಿರುವರಲ್ಲಾ?

ಕಮಲಾಬಾಯಿ:—ಮುರಲಿಯು ಕಳವು ಮಾಡಿದ್ದೂ ಮಾಡದಿದ್ದ ದ್ದೂ ಸರ್ವ ವ್ಯಾಪಿಯಾದ ಭಗವಂತನಿಗೇ ಗೊತ್ತು. ನನಗಂತೂ ಗೊತ್ತಿರುವದಿಲ್ಲ.

ಇನಸ್ಪೆಕ್ಟರರು:—ಗೊತ್ತಿಲ್ಲವೆಂದರೆ ಬಿಡದು. ಮುರಲಿಯು ಕಳವು ಮಾಡಿದ್ದು ಗೊತ್ತಿರದಿದ್ದರೂ, ಅವನು ಓಡಿಹೋದ ಸ್ಥಳವಂತೂ ಗೊತ್ತಿರ ಲೇಬೇಕು; ಕಾರಣ ಅವನನ್ನು ನಮ್ಮ ವಶಕ್ಕೆ ಕೊಟ್ಟು, ನೀನು ಬೇಕಾದ ಲ್ಲಿಗೆ ಹೋಗಬಹುದು. ಅಲ್ಲಿಯ ವರೆಗೆ ಮಾತ್ರ ನಿನ್ನ ಬಿಡುಗಡೆಯಾಗದು.

ಕಮಲಾಬಾಯಿ:—ಮಹಾರಾಜ! ಮುರಲೀಧರನು ಎಲ್ಲಿಗೆ ಹೋಗಿ ರುವನೋ ನನಗೆ ಹ್ಯಾಗೆ ಗೊತ್ತಾಗಬೇಕು? ಗೊತ್ತಿದ್ದರೆ ಇಷ್ಟರಲ್ಲಿಯೇ ಹೇಳಿಬಿಡುತ್ತಿದ್ದೆನು. ಈ ಹಾರದ ಎಲ್ಲ ರೂಪಾಯಿಗಳನ್ನು ಕೊಟ್ಟರಲು, ವಿನಾಯಕರಾಯರು ಕೊಟ್ಟಿಲ್ಲವೆಂದು ಹೇಳುತ್ತಾರೆಂದಮೇಲೆ, ಇಕೋ ಈ ಹಾರವನ್ನು ಅವರಿಗೇ ಕೊಡಿರಿ. ನಾನು ನಿರಪರಾಧಿಯಿದ್ದು ಈ ಕಳವಿನ ಬಗ್ಗೆ ಏನೂ ಗೊತ್ತಿಲ್ಲ. ಈ ನನ್ನ ಮಾತಿಗೆ ಪರಮೇಶ್ವರನೇ ಸಾಕ್ಷಿ. ಇನ್ನು

ಮೇಲೆ ನನ್ನನ್ನು ಬಿಡುಗಡೆ ಮಾಡುವದೂ, ಮಾಡದಿರುವದೂ ನಿಮ್ಮ ಕೈಯೊಳಗಿನ ಮಾತು, ಎಂದು ನುಡಿದು, ಕಂಠಿಯ ಹಾರವನ್ನು ತೆಗೆದು ಇನಸ್ಪೇಕ್ಟರರ ಮುಂದೆ ಇಟ್ಟಳು.



ಊಟದ ಹೊತ್ತು ಮೀರುತ್ತ ಬಂದದ್ದರಿಂದ ಇನಸ್ಪೇಕ್ಟರರು ಎದ್ದು ನಿಂತು:—ಕಮಲಾಬಾಯೀ, ಸದ್ಯಕ್ಕೆ ಈ ಹಾರವು ನಿನ್ನ ಕಡೆಗೇ ಇರಲಿ. ಮುರಲೀಧರನು ಸಿಕ್ಕಮೇಲೆ ಈ ಹಾರದ ಬಗ್ಗೆ ಚನ್ನಾಗಿ ಚೌಕಸೀ ಮಾಡೋಣವಂತೆ; ಈಗ ಅಡಿಗೆಯು ಬರುತ್ತದೆ. ಊಟಮಾಡಿ ಒಂದು ಕಡೆಗೆ ಸ್ವಸ್ಥ ಕುಳಿತು ಬಿಡು. ಮನೆಗೆ ಹೋಗುವ ಅಪೇಕ್ಷೆಯಿದ್ದಲ್ಲಿ ಮುರಲಿಯು ಇರುವ ಸ್ಥಳವನ್ನು ತೋರಿಸು, ಎಂದು ನುಡಿದು, ಮುರಲಿಯನ್ನು ಶೋಧಿಸುವದಕ್ಕಾಗಿ ನಾಲ್ವರು ಪೋಲೀಸರನ್ನು ನಿಯಮಿಸಿ, ಕುಳಿಂದ ಸ್ವಾಮಿಯವರಿಗ ಕಮಲಾಬಾಯಿಯೊಂದಿಗೆ ಯಾರೂ ಮಾತಾಡದಂತೆ ವ್ಯವಸ್ಥೆಯನ್ನಿಡಲಿಕ್ಕೆ ಹೇಳಿ, ತಾವು ಊಟಕ್ಕೆ ಹೋದರು.

ಮುಂದೆ ಸ್ವಲ್ಪ ಹೊತ್ತಿನ ಮೇಲೆ ಒಬ್ಬ ಬ್ರಾಹ್ಮಣ ವಿಧವೆಯು ಅಡಿಗೆಯನ್ನು ತೆಗೆದುಕೊಂಡು ಅಲ್ಲಿಗೆ ಬಂದಳು. ಕಮಲಾಬಾಯಿಯು ನಿಮಿತ್ಯಕ್ಕೆ ಊಟ ಮಾಡಿದಂತೆ ಮಾಡಿ, ಕೈತೊಳಕೊಂಡು ಒಂದು ಮೂಲೆಯಲ್ಲಿ ದೈವವನ್ನು ಶಪಿಸುತ್ತ ಕುಳಿತುಕೊಂಡಳು. ಆ ದಿನ ರಾತ್ರಿ ಎಂಟು ಗಂಟೆಯಾದರೂ ಮುರಲಿಯು ಸಿಗಲಿಲ್ಲ. ಇನಸ್ಪೆಕ್ಟರರು ಕಮಲಾಬಾಯಿಯ ಮೇಲೆ ಪೂರ್ಣ ಸಂಶಯಗೊಂಡರು. ಹಾರದ ಬಗ್ಗೆ ಅವಳೆಷ್ಟು ನಿಜ ಸಂಗತಿಯನ್ನು ಹೇಳಿಕೊಂಡರೂ ಅವರಿಗೆ ನಂಬಿಗೆಯು ಆಗಲಿಲ್ಲ; ಮುಂದೆ ಇನಸ್ಪೇಕ್ಟರರು, ತರುಣಿಯೂ-ಸುಂದರಿಯೂ ಆದ ಈ ಸ್ತ್ರೀಯನ್ನು ರಾತ್ರಿಯ ಹೊತ್ತಿನಲ್ಲಿ ಹೊರಗೆ ಕೂಡ್ರಿಸುವದು ಯೋಗ್ಯವಲ್ಲೆಂದು ಬಗೆದು, ಮತ್ತೊಮ್ಮೆ ಜುಲುಮೆಯಿಂದ ಅವಳಿಗೆ ಊಟಮಾಡಿಸಿ, ಪೋಲೀಸ ಚಾವಡಿಯೊಳಗಿನ ತುರಂಗದ ಕೋಣೆಯಲ್ಲಿ ಮಲಗಹೇಳಿದರು. ಆ ಕೋಣೆಯ ಬಾಗಿಲಿಗೆ ಕೈಮುಟ್ಟ ಕೀಲೀ ಹಾಕಿ, ಕೈಯನ್ನು ತಮ್ಮ ಹತ್ತರ ಇಟ್ಟುಕೊಂಡದ್ದಲ್ಲದೆ ಕುಳಿಂದ ಸ್ವಾಮಿಯವರನ್ನು ರಾತ್ರಿಯ ಪಹರೆಗೆ ನೇಮಿಸಿ, ಮನೆಗೆ ಹೋದರು. ಇತ್ತ ಕಮಲಾಬಾಯಿಯು ಮಲಗಿಕೊಳ್ಳದೆ, ಅನೇಕ ಬಗೆಯಾಗಿ ಹಂಬಲಿಸುತ್ತ ಕುಳಿತುಬಿಟ್ಟಳು!

---

## ನಾಲ್ಕನೆಯ ಪರಿಚ್ಛೇದ.

ಯಾರೋ ಮುರಲೀಧರನ ಕೈಕಾಲುಗಳನ್ನು ಬಂಧಿಸಿ, ಹೊತ್ತುಕೊಂಡು ಹೋದದ್ದು ವಾಚಕರ ಸ್ಮರಣದಲ್ಲಿರಬಹುದು; ಮತ್ತು ಮುಂದಿನ ಸಂಗತಿಯನ್ನು ತಿಳಿದುಕೊಳ್ಳುವ ಉತ್ಕಟೇಚ್ಛೆಯಾದರೂ ಆಗಿರಬಹುದು; ಮುರಲೀಧರನನ್ನು ಹೊತ್ತುಕೊಂಡು ನಡೆದ ಆ ಭಯಂಕರ ಮೂರ್ತಿಗಳು ಜನರ ಸುಳುವಿಲ್ಲದ ಓಣಿಯೊಳಗಿಂದ ಪಾರಾಗಿ, ಮಾರ್ಕೇಟಿನ ಉತ್ತರ ದಿಕ್ಕಿಗಿರುವ ಹಾಳು ಕಿಲ್ಲೆಗೆ ಬಂದವು; ನಮ್ಮ ಕಥಾನಕವು ನಡೆದ ಕಾಲದಲ್ಲಿ ಆ ಕಿಲ್ಲೆಯು ಈಗಿನಷ್ಟು ಹಾಳಾಗಿರದೆ ಮಾರುತಿಯ ಗುಡಿ, ಗರಡೀ ಸಾಧಕದ ಮನೆ, ಮದ್ದು ಗುಂಡಿನ ಮನೆ ಹೀಗೆ ಮೂರು ಸಣ್ಣ ಸಣ್ಣ ಖೋಲಿಗಳು ಕಲ್ಲಿನ ಬಾಗಿಲು ಸಹಿತವಾಗಿ ಭದ್ರವಾಗಿದ್ದವು. ಅದರೊಳಗಿನದೊಂದು ಖೋಲಿಯಲ್ಲಿ ಯಾವ ದುರುದ್ದೇಶದಿಂದಲೋ ಮುರಲೀಧರನನ್ನು ಹಾಕಿ, ಬಾಗಿಲಿಕ್ಕಿಕೊಂಡು ಹೋಗಿ ಬಿಟ್ಟವು!

ಕೆಲ ಹೊತ್ತಿನ ಮೇಲೆ ಮುರಲಿಯು ಎಚ್ಚತ್ತು ನೋಡುತ್ತಾನೆ; ನೂಲಿನ ಹಗ್ಗದಿಂದ ಕೈಕಾಲುಗಳೆಲ್ಲ ಕಟ್ಟಲ್ಪಟ್ಟವೆ. ಬಾಯಿಯಲ್ಲಿ ಚನ್ನಾಗಿ ಅರಿವೆಯನ್ನು ತುರುಕಿದ್ದರಿಂದ ಸರಳವಾಗಿ ಉಸಿರಾಡಿಸಲಿಕ್ಕೂ ಬಾರದಾಗಿದೆ. ಸುತ್ತಲೂ ಗಾಢಾಂಧಃಕಾರವು ಮುಸುಕಿ, ಜನರ ಗದ್ದಲವು ಸ್ವಲ್ಪೂ ಕೇಳಬರದಾಗಿದೆ. ಈಗ ನಾನು ಎಲ್ಲಿ ಇರುವೆನು? ಕೈಕಾಲುಗಳನ್ನು ಕಟ್ಟಿ ಬಾಯೊಳಗೆ ಯಾರು ಅರಿವೆಯನ್ನು ತುರುಕಿರಬಹುದು? ಎಂದು ಯೋಚಿಸುತ್ತ ಮುರಲೀಧರನು ಬಹಳ ಪ್ರಯಾಸದಿಂದ ಕಟ್ಟಿದ ಹಗ್ಗವನ್ನು ಬಿಚ್ಚಿಕೊಂಡು, ಒತ್ತಿ ತುಂಬಿದ ಬಾಯೊಳಗಿನ ಅರಿವೆಯನ್ನು ತೆಗೆದುಕೊಂಡನು. ಈಗ ಸ್ವಲ್ಪ ಸಮಾಧಾನವಾದಂತಾಗಿ ಸುತ್ತಮುತ್ತು ಕೈಯಾಡಿಸಿ ನೋಡಹತ್ತಿದನು. ಹವೆಯ ಪ್ರವೇಶಕ್ಕೂ ಕೂಡಾ ಮಾರ್ಗವಿಲ್ಲದ ಆ ಪುರಾತನದ ಭದ್ರವಾದ ಖೋಲಿಯಲ್ಲಿ, ಅವನಿಗೆ ಸುತ್ತಮುತ್ತು ಹುರುಬರಕಾದ ಕಲ್ಲಿನ ಗೋಡೆಯ ಹೊರತು ಮತ್ತೇನೂ ಹತ್ತಲಿಲ್ಲ; ಹಿಂದೆರಡು ಸಾರೆ ಆ ಖೋಲಿಯನ್ನು ಅವನು ನೋಡಿದ್ದರಿಂದಲೂ, ಮತ್ತು ಒಂದು ಮೂಲೆಯಲ್ಲಿ ದೊಡ್ಡ ಬೀಸುವ ಕಲ್ಲು ಇದ್ದದರಿಂದಲೂ, ಅವನು

ಕೂಡಲೇ ಅದು ಹಾಳು ಕಿಲ್ಲೆಯೊಳಗಿನ ಮದ್ದು-ಗುಂಡಿನ ಖೋಲಿಯೆಂದು ತಿಳಿದನು; ಆ ಮೇಲೆ ಬೀಸುವ ಕಲ್ಲಿನ ಆಧಾರದ ಮೇಲಿಂದ ಗೋಡೆಯಂತೆ ಸಪಾಟಾಗಿರುವ ಬಾಗಿಲನ್ನು ಹುಡುಕಿ, ಕದ ತೆಗೆಯ ಹತ್ತಿದನು. ಮೊದಲೇ ಭಾರವಾಗಿದ್ದ ಆ ಕದವು, ಈಗ ಹೊರ ಚಿಲಕವನ್ನು ಹಾಕಿದ್ದರಿಂದ ತೆಗೆಯಲಿಕ್ಕೆ ಬರಲಿಲ್ಲ. ನಾನೆಷ್ಟು ದಣಕೊಂಡರೂ ಕದವು ತೆಗೆಯಲಿಕ್ಕೆ ಬರಲಿಲ್ಲವಲ್ಲಾ! ಎಂದು ಅವನು ಚಿಂತಾಕ್ರಾಂತನಾಗಿ, ಇಲ್ಲಿ ನಾನು ಬಂದದ್ದಾದರೂ ಹೇಗೆ? ಎಂದು ಮತ್ತೆ ಯೋಚಿಸುತ್ತ ಕುಳಿತುಬಿಟ್ಟನು. ವಿಚಾರಾಂತ್ಯದಲ್ಲಿ ಏನೂ ತಿಳಿಯದೆ ಬೇಸತ್ತು ಉಸುರ್ಗಳೆಯುತ್ತ ತನ್ನ ಎಡಗೈಯನ್ನು ನೆಲಕ್ಕೆ ಊರಲು, ಕೈಗೆ ಹಸಿ ಹತ್ತಿತು. ಈ ಹಸಿಯು ಎಲ್ಲಿಯದೆಂದು ನೋಡುತ್ತಾನೆ, ಬಾವಿಗೆ ಹಿಗೆಯಲಿಕ್ಕೆಂದು ಹಿಯ್ದ ಮೈಲಿಗೆಯ ಅರಿವೆಯ ಗಂಟಿನದಾಗಿತ್ತು. ಕೂಡಲೆ ಅವನಿಗೆ ಎಲ್ಲವೂ ಸ್ಮರಣೆಗೆ ಬಂದು ನೀರಿನಲ್ಲಿ ಕಂಡ ಪ್ರತಿಬಿಂಬದ ಭಯಂಕರ ಮೂರ್ತಿಗಳೇ ತಾನು ಭಯಪಟ್ಟು ಸ್ಮೃತಿದಪ್ಪಿ ಬಿದ್ದಮೇಲೆ ಇಷ್ಟೆಲ್ಲ ಅನರ್ಥವನ್ನು ಮಾಡಿರಬೇಕು, ಎಂದು ತರ್ಕಿಸಿದನು; ಆದರೆ, ಇಷ್ಟೆಲ್ಲ ಅನರ್ಥವನ್ನು ಮಾಡಿದ ಅವರ ಉದ್ದೇಶವೇನಿರಬಹುದು? ಎಂಬದು ಮಾತ್ರ ತಿಳಿಯದಂತಾಗಿ, ಬಹಳ ಕಳವಳಗೊಂಡನು. ಬರಬರುತ್ತ ಹೊಟ್ಟೆಹಸಿದು, ಕಸವಿಸಿಯಾಗಹತ್ತಿತು; ಕೂಗಿಕೊಳ್ಳುವದಾಯಿತು. ಹಿದರಿಕೊಳ್ಳುವದಾಯಿತು. ಅದರಿಂದ ಬಿಡುಗಡೆಗೆ ಯಾವ ಪ್ರಯೋಜನವೂ ಆಗಲಿಲ್ಲ. ಕಡೆಗೆ ಅವನು ನಿರಾಶನಾಗಿ ದೇವರಿಗೆ ಮೊರೆಯಿಡುತ್ತ ಹೊಟ್ಟೆಯನ್ನು ನೆಲಕ್ಕೆ ಹಚ್ಚಿ ಮಲಗಿಕೊಂಡನು.

ಹೀಗೆ ಎಷ್ಟೋ ಹೊತ್ತು ಕ್ರಮಿಸಿದ ಮೇಲೆ ಹಿಮ್ಮೆಲೆ ಬಾಗಿಲವು ತೆರೆದು ಬೆಳದಿಂಗಳ ಮಂದಪ್ರಕಾಶವು ಖೋಲಿಯೊಳಗೆ ಬಿದ್ದಿತು. ಇದನ್ನು ನೋಡಿ ಮುರಲೀಧರನು ಆನಂದಾಶ್ಚರ್ಯಗಳಿಂದ ಕೂಡಿದವನಾಗಿ ಹೊರಗೆ ಬಂದು ನೋಡುತ್ತಾನೆ, ಬಾಗಿಲ ತೆರದವರಾರೂ ಅಲ್ಲಿ ಇದ್ದಿಲ್ಲ. ಅದೇ ಚಂದ್ರನು ಉದಯಿಸಿ, ತನ್ನ ಸೌಮ್ಯಕಿರಣಗಳಿಂದ ಜೀವಕೋಟಿಯನ್ನೆಲ್ಲ ಆಹ್ಲಾದಗೊಳಿಸುತ್ತಿದ್ದನು. ಆ ದಿವಸವು ಶ್ರಾವಣ ಬಹುಳ ಸಪ್ತಮಿಯಾದ್ದರಿಂದಲೂ, ಶಶಾಂಕನು ಅದೇ ಉದಯಿಸಿದ್ದರಿಂದಲೂ ಹನ್ನೊಂದುವರಿಗಂಟೆಯಾಗಿರಬಹುದೆಂದು ತಿಳಕೊಂಡನು. ಕ್ರಿಮಿಕೀಟಕಗಳ ಚೀತ್ಕಾರ

ಧ್ವನಿಯಿಂದ ಸ್ಮಶಾನದಂತೆ ಭಯಂಕರವಾಗಿ ಕಾಣುವ ಆ ಸ್ಥಳದಲ್ಲಿ ಹೆಚ್ಚು ಹೊತ್ತು ನಿಲ್ಲುವ ಧೈರ್ಯವು ಮೊದಲೇ ವಿಹ್ವಲನಾದ ಆ ಮುರಲೀಧರನಿಗೆ ಆಗಲಿಲ್ಲ. ಪರಊರಿನ ಒಬ್ಬಿಬ್ಬರು ಇತಿಹಾಸದೃಷ್ಟಿಯಿಂದ ಮಹತ್ವಕೊಟ್ಟು ಆ ಹಾಳು ಕಿಲ್ಲೆಯನ್ನು ನೋಡಲಿಕ್ಕೆ ಬರುತ್ತಿದ್ದರಲ್ಲದೆ, ಉಳಿದವರಾರೂ ಅದರ ಸಮೀಪಕ್ಕೆ ಹಾಯುತ್ತಿದ್ದಿಲ್ಲ. ಆಗ ಮಳೆಗಾಲವಿದ್ದದರಿಂದ ಕೇಳು ವದೇನು? ಮೊದಲೇ ಮುಳ್ಳುಗಳ್ಳಿಯ ತವರುಮನೆಯಾದ ಆ ಕಿಲ್ಲೆಯು ಈಗ ಹುಲ್ಲುಕಂಟೆಗಳಿಂದ ಕಾಡುಗೂಡಿ ಹೋಗಿತ್ತು. ಹೀಗಿರಲು ಮಧ್ಯ ರಾತ್ರಿಯ ಹೊತ್ತಿನಲ್ಲಿ ಇಂಥ ಭಯಪ್ರದ ಸ್ಥಳದೊಳಗೆ ನಿಲ್ಲುವದು ಆ ಕೋಮಲಾಂತಃಕರಣದ ಮುರಲೀಧರನಿಂದ ಹ್ಯಾಗಾದೀತು? ಅವನು ಬಾಗಿಲತೆರೆದವರಾರೆಂದು ತಿಳಿದುಕೊಳ್ಳುವ ಗೊಡವೆಗೆ ಹೋಗದೆ, ಅಂಜುತ್ತಂಜುತ್ತ ತನ್ನ ಅರಿವೆಯ ಗಂಟನ್ನು ತೆಗೆದುಕೊಂಡು ಮನೆಯ ಹಾದೀ ಹಿಡಿದನು; ಆದರೆ ಇಡಿ ದಿವಸವೆಲ್ಲ ಉಪವಾಸ ಬಳಲಿದ್ದರಿಂದ ಕಣ್ಣಿಗೆ ಕತ್ತಲು ಗೂಡಿಸಿದಂತಾಗಿ ನಡೆಯಲಿಕ್ಕೆ ಬರಲೊಲ್ಲದು. ತನ್ನ ಆಕಸ್ಮಿಕ ವಿಯೋಗದಿಂದ ದುಃಖಿತರಾದ ತಾಯಿ-ತಮ್ಮಂದಿರನ್ನು ಯಾವಾಗ ನೋಡುವೆನೋ ಎಂಬ ಉತ್ಕಟೇಚ್ಛೆಯೇ ಆ ಮಾತೃಪ್ರೇಮಿಯಾದ ಮುರಲೀಧರನನ್ನು ಅಂತೂ ಇಂತೂ ಮಾರ್ಕೇಟನವರೆಗೆ ಎಳೆದುಕೊಂಡು ಬಂದಿತು.

ಮಾರ್ಕೇಟಿನ ಹತ್ತರವೇ ಇರುವ ಪೋಲೀಸ ಚೌಕಿಯಲ್ಲಿ ಒಬ್ಬ ಹವಲದಾರನೂ, ಇಬ್ಬರು ಪೋಲೀಸರೂ ಮಾತಾಡುತ್ತ ಕುಳಿತಿದ್ದರು. ಅವರಲ್ಲಿಯ ಒಬ್ಬ ಪೋಲೀಸನು ಮುರಲಿಯನ್ನು ನೋಡಿ:— ಯಾರವರು ನಡುರಾತ್ರಿಯಲ್ಲಿ ಎಲ್ಲಿಗೆ ಹೋಗುವಿರಿ? ನಿಲ್ಲಿರಿ, ಎಂದು ಅಧಿಕಾರಯುಕ್ತಸ್ವರದಿಂದ ಕೇಳಿದನು. ಮುರಲೀಧರನಿಗೆ ಮಾತಾಡುವಷ್ಟು ಶಕ್ತಿಯೂ ಇಚ್ಛೆಯೂ ಇಲ್ಲದ್ದರಿಂದ ಅವನು ಉತ್ತರ ಕೊಡದೆ ಹಾಗೆಯೇ ಮುಂದಕ್ಕೆ ಸಾಗಿದನು. ಕೂಡಲೇ ಸಂಶಯಯುಕ್ತರಾಗಿ ಮೂವರೂ ಎದ್ದು ಹೊರಗೆ ಬಂದರು. ಅವರಲ್ಲಿ ಹವಾಲದಾರನು ಮುರಲೀಧರನ ತೀರ ಸಮೀಪಕ್ಕೆ ಬಂದು ಗರ್ಜಿಸಿ:—ನಿನ್ನ ಕಿವಿಗಳು ಕೇಳುವದಿಲ್ಲವೋ? ನಿಲ್ಲು, ಒಂದು ಹೆಜ್ಜೆಯನ್ನು ಮುಂದಕ್ಕಿಟ್ಟರೆ ನಿನ್ನ ಪರಿಣಾಮವಾಗದು, ಎಂದನು. ಅದಕ್ಕೆ ಮುರಲೀಧರನು ಶಾಂತವೃತ್ತಿಯ ಕ್ಷೀಣಸ್ವರದಿಂದ:—ಇಗೋ ಮಹನಿಯರೇ, ನಿಂತಿರುವೆನು. ನಾನೇನು ಕಳ್ಳನಲ್ಲ, ಸುಳ್ಳನಲ್ಲ............

ಹವಾಲದಾರನು:—ಹಾಳು ರಗಳೆಯನ್ನು ಹಚ್ಚಬೇಡ. ಮೊದಲು ನಿನ್ನ ಹೆಸರನ್ನು ಹೇಳು.

ಮುರಲೀಧರ:—ನನಗೆ ಮುರಲೀಧರರಾವ ಕುಲಕರ್ಣಿ, ಎಂದು ಕರೆಯುವರು.

ಇಷ್ಟು ಮಾತು ಮುಗಿಯುವದರೊಳಗಾಗಿ ಮುರಲೀಧರನು ಚತುರ್ಭುಜನಾಗಿ ಹೋಗಿದ್ದನು. ಹವಾಲದಾರನು ಗಹಗಹಿಸಿ ನಗುತ್ತ:— ನಾನೇನು ಕಳ್ಳನಲ್ಲ, ಸುಳ್ಳನಲ್ಲ, ಎಂದು ಹೇಳಿ, ಪಾರಾಗಿ ಹೋಗಬೇಕೆಂದು ಮಾಡಿದ್ದಿಯಾ? ನಿಲ್ಲು, ಇಷ್ಟೊತ್ತಿನವರೆಗೆ ಎಲ್ಲಿ ಅಡಗಿಕೊಂಡಿದ್ದಿ? ಎಂದು ಕೇಳಿದನು.

ಯಾವ ಪಾಪವನ್ನೂ ಅರಿಯದ ಮುರಲಿಯು ಹವಾಲದಾರರ ಈ ಉದ್ಧಟತನಕ್ಕೆ ಕಂಗಾಲಾಗಿ:—ಯಾಕೆ, ಪೋಲೀಸರೇ ಬಾಯಿಗೆ ಬಂದಂತೆ ಮಾತಾಡುವಿರಿ? ನಾನೇನು ಅಂಥ ತಪ್ಪು ಮಾಡಿರುವೆನೆಂದು ಕೈಹಿಡಿದಿರಿ? ಬಿಡಿರಿ. ಸುಮ್ಮನೆ ಕೈಬಿಟ್ಟುಬಿಡಿರಿ. ನನ್ನ ವೃತ್ತಾಂತವನ್ನು ಕೇಳಿ ತಿಳಿದುಕೊಳ್ಳುವ ಜಿಜ್ಞಾಸೆಯು ನಿಮಗಿದ್ದರೆ, ನಿಮ್ಮ ಚೌಕಿಯಲ್ಲಿ ಕುಳಿತು ಸಮಗ್ರವಾಗಿ ಹೇಳುತ್ತೇನೆ ನಡೆಯಿರಿ; ಎಂದು ನುಡಿದು, ಪೋಲೀಸರು ಕೈಹಿಡಿದಿರಲು, ಚೌಕಿಯಲ್ಲಿ ಬಂದು ಕುಳಿತನು.

ಆ ಮೇಲೆ ಒಬ್ಬ ಪೋಲೀಸನನ್ನು ಕುರಿತು ಹವಾಲದಾರರು:— ಬಸಪ್ಪಾ, ನೀನು ಓಡುತ್ತ ಇನಸ್ಪೆಕ್ಟರರ ಮನೆಗೆ ಹೋಗಿ, "ವಿನಾಯಕರಾಯರಲ್ಲಿ ಕಳವು ಮಾಡಿ ಫರಾರಿಯಾಗಿದ್ದ ಗುನ್ಹೆಗಾರನು ಸಿಕ್ಕಿರುವನು" ಎಂದು ಹೇಳಿ, ಅವರನ್ನು ಕರೆದುಕೊಂಡು ಬಾ. ಈ ಕಳ್ಳನು ಅವರ ಮುಂದೆಯೇ ತನ್ನ ವೃತ್ತಾಂತವನ್ನು ಹೇಳಲೊಲ್ಲನೇಕೆ? ಎಂದು ಹೇಳಿ ಕಳಿಸಿದರು. ಹವಾಲದಾರರ ಈ ಮಾತನ್ನು ಕೇಳಿ ಮುರಲಿಯು ಚಕಿತನಾಗಿ:— ಏನು! ನಾನು ಗುನ್ಹೇಗಾರನೇ! ವಿನಾಯಕರಾಯರಲ್ಲಿ ಅಂದರೆ, ನಮ್ಮ ಅಣ್ಣನ ಮನೆಯಲ್ಲಿ ಕಳವು ಮಾಡಿ ಓಡಿ ಹೋಗಿದ್ದೆನೇ!! ಇದೊಳ್ಳೆಯ ನ್ಯಾಯವು? ಯಾರೋ ನೀಚರು, ಆ ಸುಡಗಾಡ ಖೋಲಿಯಲ್ಲಿ ನನ್ನನ್ನು ಹಾಕಿ ಹೋಗಿರಲು, ಫರಾರಿಯಾದಂತಾಯಿತೇ? ಎಂದು ನುಡಿದು, ಹವಾಲದಾರರ ಮುಖವನ್ನು ಉತ್ಸುಕತೆಯಿಂದ ನೋಡಿದನು. ಅದಕ್ಕೆ ಹವಾಲದಾರರು ವ್ಯಂಗ್ಯಸ್ವರದಿಂದ:—ಆ ಸುಡಗಾಡ ಖೋಲಿಯಲ್ಲಿ ನಿಮ್ಮ ಅತ್ತಿಗೆಯೇ ಹಾಕಿರಬಹುದು, ಎಂದು ಉತ್ತರಕೊಟ್ಟು ಇನಸ್ಪೆಕ್ಟರರು

ಬರುವವರೆಗೆ ಸುಮ್ಮನೆ ಕೂಡ್ರಲಿಕ್ಕೆ ಜಬರಿಸಿ ಹೇಳಿದರು; ಆದರೂ, ಮುರಲೀಧರನ ಮನಸ್ಸಿನ ತಳಮಳವು ಸುಮ್ಮನಿರಗೊಡದ್ದರಿಂದ ಮತ್ತೆ ಹವಾಲದಾರರನ್ನುದ್ದೇಶಿಸಿ:-ಮಹನೀಯರೇ, ಆದದ್ದಾದರೂ ಏನು? ದಯ ಮಾಡಿ ಹೇಳಿರಿ. ನಾನು ಕಳವು ಮಾಡಿದವನಲ್ಲ. ಓಡಿಹೋದವನಲ್ಲ. ನೀಚ....

ಹವಾಲದಾರರು ಮುಂದೆ ಮಾತಾಡಗೊಡದೆ:—ಬಾಯಿ ಮುಚ್ಚು. ಮುಂದೆ ಮಾತಾಡಬೇಡ. ನನ್ನೆದುರಿಗೆ ಎಷ್ಟು ಹೇಳಿಕೊಂಡರೂ ಲಾಭ ವಾಗದು. ಇನಸ್ಪೆಕ್ಟರರು ಬರುವ ವರೆಗೆ ಸುಮ್ಮನೆ ಕುಳಿತು, ಆ ಮೇಲೆ ಅವರ ಮುಂದೆ ಬೇಕಾದಷ್ಟು ತೋಡಿಕೊ, ಎಂದು ಸಿಟ್ಟಿನಿಂದ ಗದ್ದರಿಸಿದರು. ಮುರಲೀಧರನಾದರೂ ಉಪಾಯವಿಲ್ಲದೆ ಸುಮ್ಮನೆ ಕುಳಿತುಕೊಂಡನು.

ಮುಂದೆ ಸ್ವಲ್ಪ ಹೊತ್ತಿನ ಮೇಲೆ ಎಡಗಡೆಯ ರಸ್ತೆಯಲ್ಲಿ ಕರ ದೀಪದ ಬೆಳಕಿನಲ್ಲಿ ಯಾರೋ ಬರಹತ್ತಿದರು. ಇದನ್ನು ನೋಡಿ, ಹವಾ ಲದಾರರು ಇನಸ್ಪೆಕ್ಟರರೇ ಇರಬಹುದೆಂದು ತಿಳಿದು, ಸಾವರಿಸಿಕೊಳ್ಳು ವಷ್ಟರಲ್ಲಿ ಓವ್ಹರಕೋಟನಿಂದ ಮೈಯನ್ನೆಲ್ಲ ಮುಚ್ಚಿಕೊಂಡ ಇನಸ್ಪೆಕ್ಟರ ಸಾಹೇಬರು ಚೌಕಿಗೆ ಬಂದರು. ಮುರಲೀಧರನನ್ನು ಮೊದಲು ಮಾಡಿ ಕೊಂಡು ಎಲ್ಲರೂ ವಿನಯದಿಂದ ಮುಜುರೆ ಮಾಡಿದರು. ಅರೆನಿದ್ದೆಯಲ್ಲಿ ಎದ್ದು ಬಂದದ್ದರಿಂದ ಇನಸ್ಪೆಕ್ಟರರ ಕಣ್ಣುಗಳು ಕೆಂಪಾಗಿದ್ದು, ಮುಖವು ನಿಸ್ತೇಜವಾಗಿತ್ತು; ಈಗ ಅವರು ಎದುರಿಗೆ ಪೋಲೀಸನಿಂದ ಹಿಡಿಯಲ್ಪಟ್ಟು ನಿಂತುಕೊಂಡಿದ್ದ ಮುರಲಿಯನ್ನು ದಿಟ್ಟಿಸಿ ನೋಡುತ್ತ:—ಯಂಕಾ, ಕೈ ಬಿಡು ಯಾಕೆ ಅವನನ್ನು ಹಿಡಿದಿರುವೆ? ಮುರಲೀ, ಕೂತುಕೋ. ಅದೇ ತರ ಗಂಟು ಅಲ್ಲಿ ಇಟ್ಟದ್ದು? ಎಂದರು. ಹವಾಲದಾರರು ಅವಸರದಿಂದ ಆ ಮೈಲಿಗೆಯರಿವೆಯ ಗಂಟನ್ನು ಇನಸ್ಪೆಕ್ಟರರ ಮುಂದೆ ಇಟ್ಟು:—ಇದು ಈ ಮುರಲಿಯದು. ಅವನ ಕೈಯಲ್ಲಿತ್ತು, ಎಂದು ವಿನಯದಿಂದ ಹೇಳಿ ದರು. ಇನಸ್ಪೆಕ್ಟರರು ಆ ಗಂಟನ್ನು ಕೈಯಿಂದ ಹಿಚಿಕಿ ನೋಡಿ:— ಇದೇನು! ಹಿಗರ ಹಸಿಯು? ಮೈಲಿಗೆಯರಿವೆಯದೆಂದು ತೋರುತ್ತದೆ, ಎಂದು ನುಡಿದು ಒಂದು ಕಡೆಗೆ ಸರಿಸಿ, ಮುರಲಿಯನ್ನು ಕುರಿತು:— ಮುರಲೀ, ನಾನು ಕೇಳಿದ್ದಕ್ಕೆಲ್ಲ ನಿಜವಾಗಿ ಉತ್ತರ ಕೊಡು; ಅಂದರೆ, ನಿನ್ನ ಹಿಂದು ಕೂಡಲು ಕೊಂಕಿಸಿಗೊಡುವದಿಲ್ಲ, ಹೂಂ ಹೇಳು. ಕಳವಿನ ಎಲ್ಲ ಮಾಲನ್ನು ಎಲ್ಲಿ ಇಟ್ಟಿರುವೆ?

ಮುರಲೀಧರ:—ಮಹಾರಾಜ, ಕಳವಿನ ವಿಷಯಕ್ಕೆ ನನಗೇನೂ ಗೊತ್ತಿಲ್ಲದೆ ನಾನೇನು ಹೇಳಲಿ?

ಇನಸ್ಪೆಕ್ಟರರು(ಆಶ್ಚರ್ಯಯುಕ್ತ ಮುದ್ರೆಯಿಂದ):—ಆ, ಏನೆಂದಿ? ಕಳವಿನ ವಿಷಯಕ್ಕೆ ನಿನಗೆ ಏನೂ ಗೊತ್ತಿಲ್ಲವೋ? ಅಣ್ಣನ ಮನೆಯಲ್ಲಿ ಕಳವು ಮಾಡಿ ಏನೂ ಗೊತ್ತಿಲ್ಲದವನಂತೆ ನಟಿಸುವಿಯಾ? ಕಳವು ಮಾಡಿದವರಿಗೆ ಕಳವಿನ ವಿಷಯವು ಗೊತ್ತಿರದೆ, ಮತ್ತಾರಿಗೆ ಗೊತ್ತಿರಬೇಕು?

ಮುರಲೀಧರ:—ನಾನು ಕಳವು ಮಾಡಿದ್ದರಷ್ಟೇ ಗೊತ್ತಿರುವದು?

ಇನಸ್ಪೆಕ್ಟರರು:—ಹೀಗೆ ಹೇಳಿ ಜಾರಿ ಹೋಗಬೇಕೆಂದು ಮಾಡಿರುವಿಯಾ? ಮುರಲೀ, ಬಹಳ ಎಚ್ಚರದಿಂದ ಮಾತಾಡು. ತಪ್ಪಿಗೆ ಒಪ್ಪಿಕೊಂಡು ಸುಮ್ಮನೆ ದಾಗೀನೆಗಳನ್ನು ಕೊಟ್ಟು ಮನೆಗೆ ಹೋಗಿ ಬಿಡು; ನೀನು ಎರಡನೆಯವರ ಮನೆಯಲ್ಲಿ ಕಳವು ಮಾಡಿದ್ದಾದರೂ ಅಷ್ಟೇ ಅದೆ. ಇಷ್ಟಾಗಿ ನೀನು ಕಳವು ಮಾಡದಿದ್ದರೆ, ಕಮಲಾಬಾಯಿಯ ಕೊರಳೊಳಗೆ ಕಂಠಿಯ ಹಾರವು ಎಲ್ಲಿಂದ ಬಂತು?

ಮುರಲೀಧರ:—ರಾವಸಾಹೇಬ, ಆ ಹಾರವು ನಮ್ಮದೇ; ಎಂದು ನುಡಿದು, ಮೊದಲು ನೂರುರೂಪಾಯಿಗಳಿಗೆ ಒತ್ತಿ ಇಟ್ಟಾಗಿನಿಂದ ಸಾದ್ಯಂತ ವೃತ್ತಾಂತವನ್ನು ಹೇಳಿದ್ದಲ್ಲದೆ, ಅಣ್ಣನು ಇಲ್ಲದ ಸಮಯದಲ್ಲಿ ನೆವ ಹೇಳಿ ಹಾರವನ್ನು ಇಸಕೊಂಡು ಬಂದದ್ದರಿಂದ ಅದನ್ನು ನುಂಗಬೇಕೆಂದು ಕೂತಿದ್ದ ವಿನಾಯಕರಾಯರು ಹೀಗೆ ನನ್ನ ಮೇಲೆ ಸುಳ್ಳು ಖಟ್ಲೆ ಮಾಡಿರಬಹುದೆಂದು ಸಹ ಹೇಳಿದನು.

ಇನಸ್ಪೆಕ್ಟರರು(ತಲೆಯನ್ನಲ್ಲಾಡಿಸುತ್ತ):—ಹೀಗೇನು? ಇದಕ್ಕೊ ಸಮ್ಮತಿಸುವಾ; ಆದರೆ ಕಳವು ಮಾಡಿದ ನೀನು ಈ ಇಡೀ ದಿವಸ ಯಾಕೆ ಅಡಗಿಕೊಂಡು ಕೂತಿದ್ದೆ? ಹೇಳು.

ಮುರಲೀಧರ:—ಸಾಹೇಬರೇ, ನಾನು ಬೇಕಂತಲೇ ಅಡಗಿಕೊಂಡು ಕೂತಿದ್ದಿಲ್ಲ, ಎಂದು ನುಡಿದು, ತಾನು ಬಾವಿಗೆ ಒಗೆಯಲಿಕ್ಕೆ ಹೋದಾಗಿನಿಂದ ಎಲ್ಲ ಸಂಗತಿಯನ್ನು ಹೇಳಿದನು. ಇದನ್ನು ಕೇಳಿ, ಇನಸ್ಪೆಕ್ಟರರು ಯೋಚನೆಯಲ್ಲಿ ಮಗ್ನರಾದರು. ಕೆಲಹೊತ್ತಿನ ಮೇಲೆ ಅವರು ಬೆದರಿಸುವ ಸ್ವರದಿಂದ:—ಮುರಲೀ, ಇದು ನಿಜವೇ? ನೋಡು, ಈಗಿಂದೀಗಲೇ ವಿನಾಯಕರಾಯರನ್ನು ಕರೆಸಿ ಅವರನ್ನೂ ಕೇಳುತ್ತೇನೆ.

ಮುರಲೀಧರ:—ಹೌದು, ರಾವಸಾಹೇಬ ನಿಜವು. ಇದರಲ್ಲಿ ತಿಲಾಂಶವೂ ಸುಳ್ಳಿಲ್ಲ. ಪೂರ್ವದ ದ್ವೇಷದಿಂದಲೇ ವಿನಾಯಕಣ್ಣನು ಇಷ್ಟೆಲ್ಲ ಮಾಡಿರಬೇಕು; ಎಂದು ಹೇಳಿದನು.

ಇನಸ್ಪೆಕ್ಟರರ ಲಕ್ಷವು ಈಗ ಮುರಲಿಯ ಮಾತಿನ ಕಡೆಗಿದ್ದಂತೆ ತೋರಲಿಲ್ಲ. ಅವರು ಬಲವಾದ ಯೋಚನೆಯಲ್ಲಿ ಮುಳುಗಿ ಹೋಗಿದ್ದರು. ಯೋಚನಾಂತ್ಯದಲ್ಲಿ ಅವರು ಕರ್ಕಶ ಸ್ವರದಿಂದ ಹವಾಲದಾರನನ್ನು ಕುರಿತು:—ಶಿವನಂದೀ, ಈಗಲೇ ವಿನಾಯಕರಾಯರನ್ನು ಕರೆಕಳಿಸು? ಎಂದು ಹೇಳಿ, ಮುರಲಿಯ ಮುಖವನ್ನು ಸೂಕ್ಷ್ಮರೀತಿಯಿಂದ ಪರೀಕ್ಷಿಸಿ ನೋಡಹತ್ತಿದರು. ಶಿವನಂದಿ ಹವಾಲದಾರರು ಒಬ್ಬ ಶಿಪಾಯಿಯನ್ನು ವಿನಾಯಕರಾಯರನ್ನು ಕರೆದು ಬರಲಿಕ್ಕೆ ಓಡಿಸಿದರು. ವಿನಾಯಕರಾಯರನ್ನು ಕರೆಯಲಿಕ್ಕೆ ಹೋದ ಶಿಪಾಯಿಯು ಐದು ನಿಮಿಷಗಳಲ್ಲಿ ಅವರನ್ನು ಕರೆದುಕೊಂಡೇ ಬಂದನು. ಕೂಡಲೆ ಇನಸ್ಪೆಕ್ಟರರು ಆಶ್ಚರ್ಯದಿಂದ:—ಯಂಕಾ, ಇಷ್ಟು ಬೇಗನೆ ನೀನು ಮಾಳಮಡ್ಡಿಗೆ ಹೋಗಿ ಹ್ಯಾಗೆ ಕರೆದುಕೊಂಡು ಬಂದೆ? ಎಂದು ಕೇಳಿದರು.

ಅದಕ್ಕೆ ಆ ಪೋಲೀಸನು:—ರಾವಸಾಹೇಬ, ಈ ವಿನಾಯಕರಾಯರು ಇಲ್ಲಿಯೇ ದಾರಿಯಲ್ಲಿ ಭೆಟ್ಟಿಯಾದರು; ಎಂದು ನಮ್ರತೆಯಿಂದ ಹೇಳಿದನು.

ಇನಸ್ಪೆಕ್ಟರರು:—ಇದೆಲ್ಲಾ ನನಗೆ ಏನೋ ಚಮತ್ಕಾರವಾಗಿಯೇ ಕಾಣುತ್ತದೆ. ಇರಲಿ; ಸಾವುಕಾರರೇ, ನೀವು ಇಷ್ಟು ರಾತ್ರಿಯಲ್ಲಿ ಯಾವ ಕಡೆಗೆ ಹೊರಟದ್ದಿರಿ?

ವಿನಾಯಕರಾಯರು ವಿನಯದಿಂದ ನಮಸ್ಕಾರ ಮಾಡಿ:—ಮಲಗಿದರೆ ಚಿಂತೆಯಿಂದ ನಿದ್ರೆ ಬಾರದಿರಲು, ಚಾವಡಿಗಾದರೂ ಹೋಗಿ ಬರಬೇಕೆಂದು ಹೊರಟದ್ದೆನು.

ಇನಸ್ಪೆಕ್ಟರರು:—ನಿಮ್ಮ ಹಣವು ಹೋದದ್ದಾದರೂ ಎಷ್ಟು?

ವಿನಾಯಕರಾಯರು:—ಸಾವಿರ ರೂಪಾಯಿ ನಗದು, ಮುಕ್ಕಾಲು ಸೇರು ಬಂಗಾರದ ಗುಂಡು, ಬಿಂದಲಿ, ನಾಗಮುರಿಗಿ ೫ ನೂರು ರೂಪಾಯಿಗಳಿಗೆ ಒತ್ತೀ ಇಟ್ಟುಕೊಂಡಿದ್ದ ಕಂಠಿಯಹಾರ, ಅಂತೂ ಒಂದೂವರಿ ಸಾವಿರ ರೂಪಾಯಿಗಳ ಮಾಲು ಇಷ್ಟು ಹೋಗಿದೆ.

ಇನಸ್ಪೆಕ್ಟರರು:—ನಿಮ್ಮ ಪೂರ್ಣ ಸಂಶಯವು ಮುರಲೀಧರನ ಮೇಲೆಯೇ ಇರುವದೋ? ಮತ್ತೆ ಯಾರ ಮೇಲಾದರೂ ಇರುವದೋ?

ವಿನಾಯಕರಾಯರು:—ಮುರಲಿಯ ಮೇಲೆಯೇ ಇರುವದು. ಕಂಠಿಯಹಾರವು ಸಿಕ್ಕದ್ದರಿಂದಲೂ, ಮುರಲಿಯು ಗೋಡೆಯನ್ನು ಹಾರಿ ಹೋಗುವದನ್ನು ನೋಡಿದವರ ಸಾಕ್ಷಿಗಳ ಮೇಲಿಂದಲೂ ಯೋಚಿಸಿದರೆ, ಮುರಲಿಯೇ ಕಳವು ಮಾಡಿರುವನೆಂದು ಸಿದ್ಧವಾಗುವದು.

ಇನಸ್ಪೆಕ್ಟರರು ತಿರಸ್ಕಾರ ಮುದ್ರೆಯಿಂದ:—ಸಾಕ್ಷೀದಾರರನ್ನು ಸುಡಿರಿ. ಅವರೇನು? ಕಲಿಸಿದಂತೆ ಹೇಳುವರು ನೀವೂ, ಕುಳಿಂದ ಹವಾಲದಾರರೂ ಸಾವಿರ ರೂಪಾಯಿಗಳನ್ನು ಒಯ್ಯುವಾಗ ಕಡಿಮೆಯಾದ ಇಪ್ಪತ್ತೈದು ರೂಪಾಯಿಗಳ ಬದಲು ಕಂಠಿಯಹಾರವನ್ನು ಒಯ್ದದ್ದು ನಿಜವೋ? ಸುಳ್ಳೇ? ಹೇಳಿರಿ. ಈಗಲೇ ಕುಳಿಂದನನು ಕರೆಸುವೆನು.

ವಿನಾಯಕರಾಯರು:—ರಾವಸಾಹೇಬ! ಸಾವಿರ ರೂಪಾಯಿಗಳಲ್ಲಿ ಪೈಸಹ ಕಡಿಮೆಯಿದ್ದಿಲ್ಲ; ಅಂದಮೇಲೆ ಹಾರವನ್ನು ಒಯ್ಯುವ ಬಗೆಯೆಂತು? ನಮ್ಮ ರೂಪಾಯಿಗಳನ್ನು ನಾವು ಒಯ್ದದ್ದಕ್ಕೆ ಗಂಟುಗಳ್ಳನಾದ ಮುರಲಿಯು ಸೇಡುತೀರಿಸಿಕೊಳ್ಳಲಿಕ್ಕೆ ಕಳವು ಮಾಡಿರುವನು.

ಇನಸ್ಪೆಕ್ಟರರು:—ನನಗಂತೂ ಇದೆಲ್ಲವೂ ಸುಳ್ಳು ಕಾಣುತ್ತದೆ. ಆ ಕುಳಿಂದನೇ ಈ ಕಪಟನಾಟಕದ ಸೂತ್ರಧಾರನು ಇರಲಿ. ಕಡೆಗೆ ಅವನ ಸಮಾಚಾರವನ್ನು ತಕ್ಕೊಳ್ಳೋಣವಂತೆ. ಸಾವುಕಾರರೇ, ನಿಮ್ಮ ಮನೆಯಲ್ಲಿ ಕಳವು ಆದದ್ದೇ ಸುಳ್ಳು. ಇದಕ್ಕೇನೆನ್ನುವಿರಿ? ನಿಮ್ಮ ಅಣ್ಣ-ತಮ್ಮಂದಿರಲ್ಲಿ ಪಾಲು ಆಗಿರುವದೇನು?

ವಿನಾಯಕರಾಯರು:—ಪಾಲು ಆಗಿಲ್ಲ; ಆದರೂ ಇವರ ಪಾಲಿಗೆ ಬರುವದಕ್ಕಿಂತ ಹೆಚ್ಚಾಗಿ ಹಣವನ್ನು ಇವರ ಹೊಟ್ಟೆಯ ಖರ್ಚಿಗಾಗಿ ಕೊಟ್ಟದೆ.

ಇನಸ್ಪೆಕ್ಟರರು:—ಸುಳ್ಳು! ಇದೆಲ್ಲವೂ ಸುಳ್ಳು!! ಅಣ್ಣಾಜಿರಾಯರು ಅಪಾರಸಂಪತ್ತನ್ನುಗಳಿಸಿರಲು ನಾಲ್ವರಹೊಟ್ಟೆಯಖರ್ಚಿಗಾಗಿ ಕೊಟ್ಟ ಹಣದಿಂದ ಅವರ ಪಾಲು ಮುಟ್ಟಿತೆಂದು ಹೇಳುವದು ಸುಳ್ಳು!!! ಇದರಲ್ಲಿ ನೀವು ಏನೋ ಮೋಸಮಾಡಿದಂತೆ ತೋರುತ್ತದೆ. ವಿನಾಯಕರಾಯರೇ, ಮುರಲೀಧರನು ನಿರಪರಾಧಿಯು. ವಿದ್ಯೆಕಲಿತ ಸದ್ಗುಣಿಯು. ಕಮಲಾ

ಬಾಯಿಯಾದರೂ ಸಚ್ಚರಿತ್ರಳು. ಈ ದಿನ ನಮ್ಮ ಮನೆಯ ಹೆಂಗಸರು ಸಹ ಕಮಲಾಬಾಯಿಯ ಸದ್ಗುಣಗಳ ಪ್ರಶಂಸೆ ಮಾಡಿದರು. ಇಂಥ ಸುಶೀಲರನ್ನು ನೋಡಿ, ನೀವು ಮತ್ಸರಬುದ್ಧಿಯಿಂದ ಈ ಕಪಟನಾಟಕ ವನ್ನು ಹೂಡಿರುವಿರಲ್ಲವೆ! ಹೋಗಿರಿ, ಮನೆಗೆ ಹೋಗಿರಿ. ಹುಚ್ಚು ಹುಚ್ಚು ಕಾರಭಾರವನ್ನು ಮಾಡಿ, ಇದ್ದ ಮರ್ಯಾದೆಯನ್ನು ಕಳೆದುಕೊಂಡೀರಿ. ಸಹಜಾತರನ್ನು ವಂಚಿಸುವದು ಸರಿಯಲ್ಲ. ನಾಳೆಯೇ ಇವರಿಗೆ ಪಾಲು ಕೊಟ್ಟು ಬಿಡಿರಿ, ಎಂದು ಸ್ಪಷ್ಟವಾಗಿ ಹೇಳಿದರು.

ಇನಸ್ಪೆಕ್ಟರರ ಈ ಮಾತಿನಿಂದ ಖಿನ್ನ ಮನಸ್ಕರಾದ ವಿನಾಯಕರಾಯರು ಕಿಂಚಿತ್ತು ಅಂಜಿಕೆಯ ಭಾವದ ದೀನಸ್ವರದಿಂದ:—ರಾವಸಾಹೇಬ, ನಾನು ದೇವರನ್ನು ಸ್ಮರಿಸಿ ಹೇಳುತ್ತೇನೆ. ನಿನ್ನಿನ ದಿವಸ ಸಾವಿರ ರೂಪಾಯಿಗಳನ್ನು ಕೊಟ್ಟ ಕೋಟಾಚಾರ್ಯರನ್ನು ಕೇಳಿಕೊಳ್ಳಿರಿ. ಒಡಹುಟ್ಟಿದ ಅಣ್ಣ-ತಮ್ಮಂದಿರನ್ನು ನಾನೇಕೆ ವಂಚಿಸಲು ಮನಸ್ಸುಮಾಡಲಿ? ನನ್ನಲ್ಲಿ ಆ ತರದ ದುರ್ಗುಣವಿದ್ದರೆ, ಇಡಿ ಒಂದು ವರ್ಷದ ವರೆಗೆ, ಬೇಡಿದಂತೆ ಇವರಿಗೆ ರೂಪಾಯಿಗಳನ್ನು ಕೊಡುತ್ತಿದ್ದಿಲ್ಲ. ಇವರೇ ನನ್ನ ವಿಷಯಕ್ಕೆ ಮತ್ಸರವನ್ನು ತಾಳಿರುವರು; ಆದರೂ ಚಿಂತೆಯಿಲ್ಲ. ಕದ್ದ ಮಾಲಿನಲ್ಲಿ ಅರ್ಧ ಭಾಗವನ್ನು ಕೊಟ್ಟರೆ, ಸಾಕು. ಸಂತೋಷದಿಂದ ತಕ್ಕೊಳ್ಳುವೆನು, ಎಂದು ಹೇಳಿಕೊಂಡು ಒಂದೆರಡು ಹನಿ ಕಣ್ಣೀರು ಸುರಿಸಿದರು.

ಪೋಲೀಸ ಇನಸ್ಪೆಕ್ಟರ ಸಾಹೇಬರು ಮತ್ತೆ ವಿಚಾರದಲ್ಲಿ ಮುಳುಗಿದರು. ಅಷ್ಟರಲ್ಲಿ ಶಿವನಂದಿ ಹವಾಲದಾರರು, ಸುಮ್ಮನಿರದೆ ಮುರಲೀಧರನ ಮೈಲಿಗೆಯರಿವೆಯ ಗಂಟನ್ನು ಬಿಚ್ಚಿ, ಒಂದೊಂದೇ ಅರಿವೆಯನ್ನು ಜಾಡಿಸಿ ನೋಡಹತ್ತಿದರು. ಆಗ್ಗೆ ಒಂದು ಧೋತರದೊಳಗಿಂದ ಐದು ರೂಪಾಯಿಗಳೂ, ಬಿಂದಲಿಯ ಜೋಡೂ, ಕಲ್ಲು ಹಾಸಿಗೆಯ ಮೇಲೆ ಬಿದ್ದವು.

ಕೂಡಲೆ ಎಲ್ಲರೂ ಚಕಿತರಾದರು. ಇನಸ್ಪೆಕ್ಟರ ಸಾಹೇಬರ ಸಂಶಯ ನಿವಾರಣವು ಈಗ ಪೂರ್ಣವಾಗಿ, ಮುರಲೀಧರನೇ ದೋಷಿಯೆಂದು ನಿರ್ಣಯಿಸಲ್ಪಟ್ಟಿತು. ಅದರೊಂದಿಗೆ ವಿನಾಯಕರಾಯರಿಗೆ ಬಿಂದಲಿಗಳನ್ನು ತೋರಿಸುವದೂ, ಅವರು ಪ್ರಫುಲ್ಲವದನರಾಗಿ ನನ್ನವೆಂದು ಒಪ್ಪಿಕೊಳ್ಳುವದೂ ಸಹ ಆದವು. ಆ ಮೇಲೆ ಇನಸ್ಪೆಕ್ಟರರು ಮುರಲೀಧರನನ್ನು ಕುರಿತು:—ಮುರಲೀ, ಈ ಬಿಂದಲಿ-ರೂಪಾಯಿಗಳೆಲ್ಲಿಯವು?

ಮುರಲೀಧರ( ಆಶ್ಚರ್ಯಯುಕ್ತ ಮುದ್ರೆಯಿಂದ ):—ನನಗೆ ಗೊತ್ತಿಲ್ಲ; ನಾನಂತೂ ಬಾವಿಗೆ ಒಗೆಯಲಿಕ್ಕೆ ಹೋಗುವಾಗ್ಗೆ ಈ ವೈಲಿಗೆಯ ಅರಿವೆಗಳನ್ನು ನಾನೇ ಗಂಟು ಕಟ್ಟಿಕೊಂಡು ಒಯ್ದಿದ್ದೆನು.

ಇನಸ್ಪೆಕ್ಟರರು (ಕ್ರೋಧಯುಕ್ತ ಸ್ವರದಿಂದ):—ಬಹು ಎಚ್ಚರದಿಂದ ಮಾತಾಡು. ಲುಚ್ಚಾ, ಸುಳ್ಳು ಹೇಳುವೆಯಾ? ಈ ದಾಗೀನೆ-ರೂಪಾಯಿಗಳನ್ನು ತೆಗೆದುಕೊಂಡು, ಯಾವ ಊರಿಗೆ ಓಡಿ ಹೋಗಬೇಕೆಂದು ಮಾಡಿದ್ದೆ ಹೇಳು. ಒಳ್ಳೆಯ ಮಾತಿನಿಂದ ನಿಜ ಹೇಳು. ಇನ್ನುಳಿದ ದಾಗಿನೆ-ರೂಪಾಯಿಗಳನ್ನು ಎಲ್ಲಿ ಇಟ್ಟಿರುವೆ?

ಇನಸ್ಪೆಕ್ಟರರ ಸಂತಪ್ತ ಮುದ್ರೆಯನ್ನು ನೋಡಿ, ಮುರಲಿಯು ಥರಥರ ನಡುಗಿದನು. ಬಾಯಿಂದ ಮಾತುಗಳೇ ಹೊರಡದಾದವು.

ಇದನ್ನು ನೋಡಿ, ಇನಸ್ಪೆಕ್ಟರರು ಮತ್ತಿಷ್ಟು ಸಿಟ್ಟಿನಿಂದ:—ಯಾಕೆ, ಸುಮ್ಮನೆ ಕುಳಿತುಕೊಂಡೆ? ಪೋಲೀಸರ ಕೈಯಲ್ಲಿ ಸಿಕ್ಕ ಕಳ್ಳನು ಪಾರಾಗಿ ಹೋಗುವದು ದುರ್ಲಭ. ಹೇಳು. ವೈ ಮೆತ್ತಗೆ ಮಾಡಿಸಿಕೊಂಡೀ? ತಿಳಿಯಿತೇ? ಎಂದು ಗರ್ಜಿಸಿದರು. ಅದಕ್ಕೆ ಉತ್ತರವಾಗಿ ಕೋಮಲ ಹೃದಯದ ಮುರಲೀಧರನು ಕುಂಠಿತ ಸ್ವರದಿಂದ:—ರಾವಸಾಹೇಬ, ತಾವು ವೈ ಮೆತ್ತಗೆ ಮಾಡಿದರೂ ಅಷ್ಟೇ? ಬಿಟ್ಟರೂ ಅಷ್ಟೆ? ನಾನು ಕಳವನ್ನೇ ಮಾಡಿಲ್ಲ; ಅಂದಮೇಲೆ ದಾಗೀನೆ-ರೂಪಾಯಿಗಳನ್ನೆಲ್ಲಿಂದ ಕೊಡಲಿ?

ಇನಸ್ಪೆಕ್ಟರರು ಇಲ್ಲ-ಇಲ್ಲ. ನೀನು ಕಳವು ಮಾಡಿದ್ದೇನಿಶ್ಚಯವು. ಮುರಲೀ, ತಿಳಿದು ನೋಡು; ನೀನಿನ್ನೂ ವಿದ್ಯೆಕಲಿಯತಕ್ಕವನು. ಸರಕಾರೀ ನೌಕರಿಯಲ್ಲಿ ಸೇರತಕ್ಕವನು. ಈಗಲೇ ಅಲ್ಪ ಸುಖಕ್ಕಾಗಿ ನಿನ್ನ ಭಾವೀ ಅಪಾರ ಸೌಖ್ಯವನ್ನು ಕಳೆದುಕೊಳ್ಳಬೇಡ. ಸುಮ್ಮನೆ ನಿಜ ಹೇಳಿ ಬಿಡು. ಮಹಾನುಭಾವರಾದ ನಿಮ್ಮ ತಂದೆಯವರ ಹೆಸರಿನಿಂದ ಇದೊಂದು ಸಾರೆ ಕ್ಷಮಿಸಿ ಬಿಡುತ್ತೇನೆ.

ಮುರಲೀಧರ:—ಮಹಾರಾಜ! ತಾವು ಹೇಳುವದೆಲ್ಲ ನನಗೆ ತಿಳಿಯುತ್ತದೆ; ಆದರೆ, ಏನು ಮಾಡಲಿ? ದೇವರು ನನಗೆ ಪರರ ಸ್ವತ್ತನ್ನಪಹರಿಸುವ ನೀಚಗುಣವನ್ನು ಕೊಟ್ಟೇ ಇಲ್ಲ. ಅಂದಮೇಲೆ ನಿಜವನ್ನು ಹೇಳೆಂದರೆ, ಏನು ಹೇಳಲಿ? ತಾವು ನನ್ನನ್ನು ಉರಿಯುವ ಕಿಚ್ಚಿನಲ್ಲಿ ದೂಡಿ ಕೊಟ್ಟು ಕೇಳಿದರೂ, ನನ್ನ ಬಾಯಿಂದ ಇದೇ ನಿಜ ಉತ್ತರವು ಹೊರಡು

ವದಲ್ಲದೆ ಅನ್ಯ ಉತ್ತರವು ಹೊರಡಲಾರದು, ಎಂದು ನುಡಿದು ಅಧೋವದನನಾಗಿ ಕುಳಿತು ಬಿಟ್ಟನು.

ಮುರಲೀಧರನ ಮಾತುಗಳಿಂದ ಇನಸ್ಪೆಕ್ಟರ ಸಾಹೇಬರಿಗೆ ಬೇಸರಿಟ್ಟುಹೋಯಿತು. ಆಗ ಅವರು:—ಮುರಲೀ, ನೀನು ಈಗ ಒಪ್ಪಿಕೊಳ್ಳದಿದ್ದರೂ ನಿದ್ದೆ ಇಲ್ಲದೆ ಬೆಳತನಕ ಕೂಡ್ರಿಸಿದರೆ ನಾಳೆ ಎಲ್ಲವನ್ನೂ ಹೇಳಿಯೇ ಹೇಳುವಿ. ಇದರಲ್ಲಿ ಏನೂ ಸಂಶಯವಿಲ್ಲ; ಆದರೆ ನಿನ್ನ ದುರ್ದೈವವು ಬಲವತ್ತರವಿದ್ದಮೇಲೆ ನಾನಾದರೂ ಏನು ಮಾಡಲಿ! ಈಗ ಒಪ್ಪಿಕೊಂಡಿದ್ದರೆ, ಛೀ ಹಾಕಿ ಬಿಟ್ಟು ಬಿಡುತ್ತಿದ್ದೆನು. ಉಪಾಯವಿಲ್ಲ. ಲೋಕವಿಖ್ಯಾತರಾದ ಅಣ್ಣಾಜಿರಾವ ಡಾಯರೆಕ್ಟರರ ಮಕ್ಕಳು ಇಷ್ಟು ನೀಚರಿರುತ್ತಾರೆಂದು ನಾನು ತಿಳಿದಿದ್ದಿಲ್ಲ. ಆಯಿತು, ಹೋಗು. ಒಮ್ಮೆ ವಿಜಾಪುರವನ್ನು ಕಂಡು ಬರುತ್ತೀ, ಎಂದು ನುಡಿದು, ಹವಾಲದಾರರ ಕಡೆಗೆ ಮುಖ ತಿರುವಿ ಚಮತ್ಕಾರ ದೃಷ್ಟಿಯಿಂದ ನೋಡುತ್ತ:—ಶಿವನಂದಿ, ಇವನನ್ನು ಚಾವಡಿಗೆ ತೆಗೆದುಕೊಂಡು ಹೋಗಿ, ಎಲವು ಪುಡಿಪುಡಿಯಾಗುವಂತೆ ಚನ್ನಾಗಿ ತಳಿಸಿರಿ. ಬೆಳಗಾಗುವದರೊಳಗಾಗಿ ಇವನು ಗುಹ್ನೆಗೆ ಒಪ್ಪಿಕೊಂಡು ಮಾಲು ಕೊಡಲೇಬೇಕು, ಎಂದು ಸುಳ್ಳೇ ಬೆದರಿಕೆ ಹೇಳಿ, ಮನೆಗೆ ಹೋಗುವದಕ್ಕಾಗಿ ಹೊರಟರು. ಒಬ್ಬ ಸಿಪಾಯಿಯು ಕಂದೀಲು ಹಿಡಿದುಕೊಂಡು ಇನಸ್ಪೆಕ್ಟರರೊಂದಿಗೆ ಹೋದನು. ಇತ್ತ ಶಿವನಂದಿ ಹವಾಲದಾರರು, ಯಂಕನೆಂಬ ಮತ್ತೊಬ್ಬ ಪೊಲೀಸನನ್ನು ಚೌಕಿಯಲ್ಲಿಟ್ಟು ತಾವೂ ವಿನಾಯಕರಾಯರೂ ಕೂಡಿ, ಮುರಲೀಧರನನ್ನು ಕರೆದುಕೊಂಡು ಚಾವಡಿಗೆ ಹೋದರು.

ವಾಚಕ ಮಹಾಶಯರೇ, ಇಡೀ ದಿವಸ ಉಪವಾಸ ಕೊರಗಿದ್ದರಿಂದ ಮುರಲೀಧರನು ನಿಶ್ಶಕ್ತನಾಗಿ ಹೋಗಿರುವನು. ಅವನಿಂದ ಲಗು ಲಗು ನಡೆಯುವದಾಗಲೊಲ್ಲದು. ನಾವು ಇವರ ಸಂಗತಿಯನ್ನು ಬಿಟ್ಟು ಒತ್ತರದಿಂದ ಚಾವಡಿಗೆ ಹೋಗಿ ದುಃಖವ್ಯಾಕುಲಳಾದ ಕಮಲಾಬಾಯಿಯ ಗತಿಯು ಏನಾಗಿದೆಯೆಂಬದನ್ನು ನೋಡೋಣ ಬನ್ನಿರಿ.

ಮಧ್ಯರಾತ್ರಿಯು ಸಮಯವಾಗಿರಬಹುದು. ಕುಳಿಂದ ಸ್ವಾಮಿಯವರೂ, ಮತ್ತೆ ಇಬ್ಬರು ಪೋಲೀಸರೂ ಚಾವಡಿಯಲ್ಲಿ ಮಲಗಿಕೊಂಡಿದ್ದರು. ಮೂವರಿಗೂ ಗಾಢವಾದ ನಿದ್ರೆಯು ಹತ್ತಿತ್ತು. ಆ ಚಾವಡಿಯ

ಮಧ್ಯಭಾಗದಲ್ಲಿ ಒಂದು ಕಾಜಿನ ದೀಪವು ಪ್ರಜ್ವಲಿಸುತ್ತಿತ್ತು. ಸುತ್ತ ಮುತ್ತೆಲ್ಲ ಶಾಂತತಾ ಸಾಮ್ರಾಜ್ಯವು ನೆಲೆಗೊಂಡದ್ದರಿಂದ ಅವರ ನಿದ್ರೆಯ ಗೊರಿಕೆಗಳು ಸ್ಪಷ್ಟವಾಗಿ ಕೇಳಬರುತ್ತಲಿದ್ದವು. ಈಗ ಶಾಲು ಹೊದ್ದು ಕೊಂಡು ಮಲಗಿದ ಒಂದು ವ್ಯಕ್ತಿಯು ಸಾವಕಾಶವಾಗಿ ಎದ್ದುಕುಳಿತು, ಸುತ್ತ ಮುತ್ತು ನೋಡಹತ್ತಿತು; ಉಳಿದವರಿಬ್ಬರಿಗೂ ಚನ್ನಾಗಿ ನಿದ್ದೆ ಹತ್ತಿರುವದೆಂದು ನಂಬಿಗೆಯಾದ ಮೇಲೆ, ಮುಂದಿನ ಬಾಗಿಲವನ್ನು ಗಟ್ಟಿ ಯಾಗಿ ಇಕ್ಕಿ, ಪ್ರಕಾಶಮಾನವಾಗಿ ಉರಿಯುತ್ತಿರುವ ದೀಪವನ್ನು ಕಡಿಮೆ ಮಾಡಿತು. ಆ ಮೇಲೆ ಮೆಲ್ಲ ಮೆಲ್ಲನೆ ಕಮಲಾಬಾಯಿಯನ್ನು ಹಾಕಿದ ಹಿಂಬದಿಯ ಕೋಣೆಯ ಬಳಿಗೆ ಬಂದು, ಸಪ್ಪಳವಾಗದಂತೆ ಕೀಲಿಯನ್ನು ತೆಗೆದು, ಕದವನ್ನು ದೂಡಹತ್ತಿತು. ಕದದ ಕಿರ್ರೆಂಬ ಸಪ್ಪಳವನ್ನು ಕೇಳಿ, ಮಲಗಿಕೊಂಡಿದ್ದ ಕಮಲಾಬಾಯಿಯು ಗಾಬರಿಯಾಗಿ ಒಮ್ಮೆಲೆ ಎದ್ದು ಕುಳಿತು:—ಯಾರವರು! ಬಾಗಿಲವನ್ನು ತೆರೆಯುವವರು? ಎಂದು ಗಟ್ಟಿ ಯಾಗಿ ಕೇಳಿದಳು. ಕೂಡಲೆ ಶಾಲು ಹೊದ್ದುಕೊಂಡ ವ್ಯಕ್ತಿಯು ಶಾಲನ್ನು ತೆಗೆದೊಗೆದು, ಕ್ಷೀಣಸ್ವರದಿಂದ:—ಯಾಕೆ? ನಾನು ಕಮಲಾ! ಅಷ್ಟು ಒದರಿ ಮಾತಾಡಬೇಡ, ಎಂದು ಹೇಳಿತು.

ಕಮಲಾಬಾಯಿಯು ಮತ್ತಿಷ್ಟು ಸ್ಪಷ್ಟವಾಗಿ:—ಯಾರು? ಹವಾಲ ದಾರರೇನು? ಯಾಕೆ ಸಾಹೇಬರೇ, ರಾತ್ರಿಯ ಹೊತ್ತಿನಲ್ಲಿ ಬಾಗಿಲ ತೆರೆ ಯುವಿರಿ? ಎಂದು ಕೇಳಿದಳು. ಕೂಡಲೆ ಹವಾಲದಾರಸಾಹೇಬರು ಮುಗುಳು ನಗೆ ನಗುತ್ತ:—ಕಮಲಾ, ನಿನ್ನ ದುಃಖವನ್ನು ನಾನು ನೋಡಲಾರೆನು. ನೀನು ಈ ದಿನ ಚೆನ್ನಾಗಿ ಊಟ ಮಾಡಿಲ್ಲವಾದ್ದರಿಂದ ಹೊಟ್ಟೆ ಹಸಿದಿರ ಬಹುದು. ಇಕೋ, ಇದನ್ನು ತಕ್ಕೋ, ತಿನ್ನು. ಸೋಡಾ ತಂದು ಕೊಡ ಲಿಯಾ? ಎಂದು ನುಡಿಯುತ್ತ ಪೇಢೆಯ ಪುಡಿಕೆಯನ್ನು ಮುಂದೆ ಹಿಡಿದು, ಕಮಲಾಬಾಯಿಯ ಚನ್ನಿಗಮುಖವನ್ನು ನೋಡುತ್ತ ನಿಂತುಕೊಂಡರು.

ಈಗ ಕಮಲಾಬಾಯಿಗೆ ತಡೆಯಲಾರದಷ್ಟು ಸಿಟ್ಟು ಬಂದಿತು. ಆದರೂ ಅದನ್ನು ಬಹಿರಂಗ ಪಡಿಸದೆ:—ನಿಮ್ಮ ಅಷ್ಟೊಂದು ಉಪಕಾರವು ನನಗೆ ಬೇಡ. ನನ್ನ ಹೊಟ್ಟೆಯೇ ಹಸಿದಿಲ್ಲ. ನಡೆಯಿರಿ. ಹವಾಲ ದಾರರೇ, ಬಾಗಿಲ ಹಾಕಿಕೊಳ್ಳಿರಿ; ಎಂದು ಹೇಳಿ, ಹಿಂದಕ್ಕೆ ಸರಿದು ನಿಂತುಕೊಂಡಳು. ಕುಳಿಂದ ಸ್ವಾಮಿಯವರು ಒಂದು ಅಡಿಯನ್ನು ಒಳಗೆ

ಇಟ್ಟು:—ಹೊಟ್ಟೆ ಹಸಿಯದಿದ್ದರೇನಾಯಿತು? ತಿನ್ನು, ಕಮಲಾ! ನಾನೆಂದರೆ ಅಷ್ಟೇಕೆ ಬೆದರುವಿ? ಕೇವಲ ನಿನ್ನ ಚರಣದಾಸನೆಂದು ತಿಳಿ. ನಿನ್ನ ಸಾನ್ನಿಧ್ಯವು ದೊರೆಯುಬೇಕೆಂದೇ ಇಷ್ಟೆಲ್ಲ ತಂತ್ರವನ್ನು ರಚಿಸಿ, ವ್ಯರ್ಥವಾಗಿ ನಿನ್ನ ಮನಸ್ಸನ್ನು ನೋಯಿಸಿದೆನು. ಅದಕ್ಕಾಗಿ ಕ್ಷಮಿಸು; ಎಂದು ನುಡಿದು, ಅಶಾಜನಕ ದೃಷ್ಟಿಯಿಂದ ಕಮಲಾಬಾಯಿಯ ಮುಖವನ್ನು ನೋಡುತ್ತ ನಿಂತುಕೊಂಡರು. ಕಮಲಾಬಾಯಿಯು ಮತ್ತಿಷ್ಟು ಹಿಂದಕ್ಕೆ ಸರಿದು ಒಂದು ಮೂಲೆಯಲ್ಲಿ ನಿಂತುಕೊಂಡು:—ಹವಾಲದಾರರೇ, ಇದೇ ನನ್ನು ನಡಿಸಿದಿರಿ? ನಿಮ್ಮಂಥ ವಿದ್ಯಾವಂತರು ಇಂಥ ಕುತ್ಸಿತ ಭಾವವನ್ನು ತಾಳಿದ್ದು ನೋಡಿ, ನನಗೆ ವಿಷಾದವೆನಿಸುತ್ತದೆ. ನಡೆಯಿರಿ, ಹೊರಗೆ ನಡೆಯಿರಿ. ಮೂರ್ಖರಂತೆ ಬಡಬಡಿಸಿ, ಈ ಕಮಲಾಬಾಯಿಯನ್ನು ಸಿಟ್ಟಿ ಗೆಬ್ಬಿಸಬೇಡಿರಿ. ಯಾಕೆ? ಮತ್ತೆ ನಿಂತುಕೊಂಡಿರಿ? ಹೊರಗಿನ ಪೋಲೀಸ ರನ್ನು ಕೂಗಲ್ಯಾ? ಎಂದು ಗರ್ಜಿಸಿದಳು. ಹವಾಲದಾರರು ಗಹಗಹಿಸಿ ನಗುತ್ತ:—ಕಮಲಾ! ನಾನು ಅಂಥ ಬೆದರಿಕೆಗೆ ಸೊಪ್ಪು ಹಾಕುವವನಲ್ಲ. ಪೋಲೀಸರು ಎಚ್ಚರಿದ್ದರೂ ಸಹ, ನಿನ್ನ ಧ್ವನಿಯು ಅವರಿಗೆ ಕೇಳಿಸುವದಿಲ್ಲ; ಇಷ್ಟಾಗಿ ಮೊದಲು ನಿನ್ನ ಮರ್ಯಾದೆಯನ್ನೂ, ಭಾವೀ ಸೌಖ್ಯವನ್ನೂ, ನೆನಿಸಿಕೋ. ನನಗನುಕೂಲಳಾಗಿ ವರ್ತಿಸಿದರೆ, ನಿನ್ನನ್ನು ಅರಗಿಳಿಯಂತೆ ಸಂರಕ್ಷಿಸುವೆನು. ತಿಳಿಯಿತೇ! ಮತ್ತು ಇದಲ್ಲದೆ ನಾಳೆಯೇ ನಿನ್ನನ್ನು ಮುಕ್ತಮಾಡಿಸಿ, ಆ ವಿನಾಯಕನನ್ನು ಗೋಳಾಡಿಸಿ ಬಿಡುವೆನು, ನೋಡು. ಇದರೊಳಗಿಂದ ಪಾರಾಗಿ, ಸೌಖ್ಯವನ್ನು ಪಡೆಯಬೇಕೆಂಬ ಆಶೆಯಿದ್ದಲ್ಲಿ ನನ್ನ ಮನಸ್ಸನ್ನು ತೃಪ್ತಿಗೊಳಿಸು, ಎಂದು ಹೇಳಿಕೊಂಡು, ಪೇಢೆಯ ಒಂದು ತುಣುಕನ್ನು ಸಥಿಯಿಂದ ಕಮಲಾಬಾಯಿಯ ಬಾಯಲ್ಲಿ ಹಾಕಹೋದನು. ಕಮಲಾಬಾಯಿಯು ಅಂಜಿ ನಡಗುತ್ತ:—"ಹವಾಲದಾರರೇ, ನಿಮಗೆ ಒಳ್ಳೆಯ ಮಾತಿನಿಂದ ಇನ್ನೊಮ್ಮೆ ಹೇಳುತ್ತೇನೆ ಹೊರಗೆ ಹೋಗಿ ಬಿಡಿರಿ. ಸರಿಯಿರಿ ಹಿಂದಕ್ಕೆ; ನನ್ನನ್ನು ಮುಟ್ಟಬೇಡಿರಿ. ಇದೂ ವರೆಗೆ ಪತಿವ್ರತೆ ಯರನ್ನು ಪಾಪದೃಷ್ಟಿಯಿಂದ ಪೀಡಿಸಿ, ಯಾರೂ ಜಯಹೊಂದಿಲ್ಲ. ಪತಿವ್ರ ತೆಯರು ಯಾವ ಸೌಖ್ಯದ ಆಶೆಗೂ ತಮ್ಮ ಪಾತಿವ್ರತ್ಯವನ್ನು ಹಾಳು ಮಾಡಿಕೊಳ್ಳರು. ನನಗೆ ಬಿಡುಗಡೆಯ ಆಶೆಯೂ ಇಲ್ಲ. ಮುಂದೆ ಸೌಖ್ಯ ಪಡೆಯುವ ಆಶೆಯೂ ಇಲ್ಲ. ನಡೆಯಿರಿ ಹೊರಗೆ. ಇಲ್ಲಿ ನಿಂತರೆ ಪರಿಣಾಮ

ವಾಗದು. ರಾತ್ರಿ ಹೊತ್ತಿನಲ್ಲಿ ಪರಪುರುಷರೊಂದಿಗೆ ಮಾತಾಡುವದೂ ಸಹ ಪಾಪಕರವಾದದ್ದು, ಎಂದು ನುಡಿದು, ಮತ್ತೊಂದು ಮೂಲೆಯಲ್ಲಿ ಹೋಗಿ, ಹುದುಗಿಕೊಂಡು ನಿಂತಳು.

ಈಗಂತೂ ಹವಾಲದಾರಸಾಹೇಬರು ಭ್ರಾಂತಿಷ್ಟರಾಗಿ ಆತುರದಿಂದ:—ಕಮಲಾ! ಪ್ರಿಯ ಕಮಲಾ!! ನಿನ್ನ ಆಟವು ನಡೆಯಲಾರದು. ನಾನು ನಿನ್ನ ಸುಂದರರೂಪಕ್ಕೆ ಮುಗ್ಧನಾಗಿರುವೆನು, ಬಾ, ನಿನ್ನ ಕೋಮಲವಾದ ಕರಗಳಿಂದ ಒಮ್ಮೆ ಬಿಗಿಯಾಗಿ ಅಪ್ಪಿಕೊಂಡು ನನ್ನನ್ನು ಪುನೀತನನ್ನಾಗಿ ಮಾಡು. ಆಹಾ! ಎಂಥ ಸೊಗಸಾದ ರೂಪವಿದು; ಇಂಥ ಸೌಂದರ್ಯಕ್ಕೆ ಯಾವ ಮನುಷ್ಯನು ಮೋಹಗೊಳ್ಳಲಿಕ್ಕಿಲ್ಲ? ಕಮಲಾದೇವೀ, ಪಂಚಪಕ್ವಾನ್ನದ ರುಚಿಕರ ಅಡಿಗೆಯನ್ನು ಬಡಿಸಿದ ತಾಟನ್ನು ಮುಂದೆ ಇಟ್ಟರಲು, ಯಾವ ನಿರೋಗಿಯ ಬಾಯಲ್ಲಿ ಜುಳು ಜುಳು ನೀರು ಒಡೆಯಲಿಕ್ಕಿಲ್ಲ? ನನ್ನ ಸುಕೃತದಿಂದಲೇ ನಿನ್ನಂಥ ಸುರಸುಂದರಿಯು ಅನಾಯಾಸವಾಗಿ ಕೈಯಲ್ಲಿ ಸಿಕ್ಕಿರಲು, ಕ್ಷುಲ್ಲಕ ಕಾರಣಗಳಿಗೆ ಅಂಜಿ, ಭೋಗಿಸದೆ ಬಿಡಲು ನಾನೇನೂ ಮೂರ್ಖನಲ್ಲ. ನಿನ್ನ ಪ್ರಾಪ್ತಿಯ ದೆಶೆಯಿಂದ ಬೇಕಾದಂಥ ಅನರ್ಥಗಳಾಗಲಿ. ಹಿಂದು ಮುಂದು ನೋಡುವದಿಲ್ಲ. ಬಾ, ಪ್ರಿಯೇ, ಮುಂದಕ್ಕೆ ಬಾ; ನಿನ್ನ ಕುಸುಮಸಮ ಕೋಮಲ ಗಲ್ಲಗಳಿಗೆ ಒಮ್ಮೆ ಮುದ್ದು ಕೊಡುತ್ತೇನೆ. ನಿನ್ನಂಥ ಸೌಂದರ್ಯದ ಖನಿಯನ್ನು ತೊಲಗಿ, ದೇಶಾಂತರ ಹೋದ ರಜನಿಯು ಎಂಥ ನಿರ್ಭಾಗ್ಯನು! ಸುರಸುಂದರೀ, ಹೇಳ ಹೆಸರಿಲ್ಲದೆ ಓಡಿಹೋದ ಆ ಷಂಢನ ಹೆಸರಿನಿಂದ ನಿನ್ನ ಯೌವನವನ್ನು ವ್ಯರ್ಥ ಹಾಳು ಮಾಡಿಕೊಳ್ಳಬೇಡ. ಈ ಮನೋಹರವಾದ ರೂಪಲಾವಣ್ಯಗಳನ್ನು ಸರಿಯಾದ ಮಾರ್ಗದಲ್ಲಿ ವಿನಿಯೋಗಿಸು. ಬಾ! ಅಟ್ಟದಮೇಲೆ ಹೋಗೋಣ, ಎಂದು ಕಾತರಸ್ವರದಿಂದ ನುಡಿದು, ಕಮಲಾಬಾಯಿಯನ್ನು ಪ್ರೇಮಭರದಲ್ಲಿ ಅಪ್ಪಿಕೊಳ್ಳಹೋದನು. ಕೂಡಲೆ ಕಮಲಾಬಾಯಿಯು ಕ್ರೋಧಸಂತಪ್ತಳಾಗಿ, ತಾನು ಮನೆಯಿಂದ ಹೊರಡುವಕಾಲಕ್ಕೆ ತೆಗೆದುಕೊಂಡು ಬಂದಿದ್ದ ಸಣ್ಣ ಚಾಕನ್ನು ನಡದೊಳಗಿಂದ ಸರಕ್ಕನೆ ಹೊರಗೆ ತೆಗೆದು, ಒಂದು ಅಡಿಯನ್ನು ಮುಂದಿಟ್ಟು:—"ಅಧಮಾಧಮಾ! ಸರಿ ಹಿಂದಕ್ಕೆ. ಮುಂದೆ ಒಂದು ಹೆಜ್ಜೆಯನ್ನಿಟ್ಟರೆ, ಇಕೋ ನೋಡು, ಕೈಯೊಳಗಿನ ಚೂರಿಯಿಂದ ಇರಿದು ಬಿಡುತ್ತೇನೆ; ನೀಚಾ! ನನ್ನನ್ನೂ ಒಬ್ಬ ವೇಶ್ಯಾ ಸ್ತ್ರೀಯೆಂದು ತಿಳಿದಿ

ರುವಿಯಾ? ಪತಿವ್ರತೆಯರು ಅಬಲೆಯರಿದ್ದರೂ ಪ್ರಸಂಗ ಬಂದಾಗ ಸಬಲ ರಾಗಿ, ನಿಮ್ಮಂಥ ನರಪಶುಗಳನ್ನು ನುಗ್ಗು ಮಾಡದೆ ಎಂದಿಗೂ ಬಿಡರು; ಹಾ! ಬಹು ಜೋಕೆ. ಎಚ್ಚರದಿಂದ ಮುಂದಕ್ಕೆ ಹೆಜ್ಜೆಯನ್ನಿಡು. ಈ ಚೂರಿಯು ನಿನ್ನನ್ನು ಹಿಂದಕ್ಕೆ ಸರಿಸದೆ ಬಿಡದು, ಎಂದು ಗರ್ಜಿಸುತ್ತ ಹವಾಲದಾರರ ಎದೆಗೆ ಗುರಿಯಿಟ್ಟು ತಿವಿಯಹೋದಳು. ಜೀವಗಳ್ಳರಾದ ಆ ಪುಕ್ಕ ಹವಾಲ ದಾರರು ದೀಪದ ಮಂದಪ್ರಕಾಶದಲ್ಲಿ ಲಕಲಕ ಮಿಂಚುವ ಆ ಬಾಕನ್ನೂ, ಕಮಲಾಬಾಯಿಯ ಆಗಿನ ರೌದ್ರಾವೇಶವನ್ನೂ ನೋಡಿ, ಅಂಜಿಬಿಟ್ಟರು. ಅವರ ಕಾಮವಾಸನೆಯ ಮಬ್ಬು ಒಮ್ಮೆಲೆ ಇಳಿದು ಹೋಯಿತು. ಕಮಲಾಬಾಯಿಯು ಒಂದೊಂದು ಅಡಿ ಮುಂದೆ ಬಂದಂತೆ ಇವರು ಹಿಂದೆ ಸರಿಯ ಹತ್ತಿದರು. ಹವಾಲದಾರರು ಸಪ್ಪಳಿಲ್ಲದೆ ಬಾಗಿಲ ದಾಟದ ಕೂಡಲೆ ಕಮಲಾಬಾಯಿಯು ಕದ ಮುಚ್ಚಿಕೊಂಡು ಬಿಟ್ಟಳು; ಆದರೆ, ಅದಕ್ಕೆ ಒಳಚಿಲಕವಿಲ್ಲದ್ದರಿಂದ ಒಂದು ಕೈಯಿಂದ ಒತ್ತಿ ಹಿಡಕೊಂಡು ನಿಂತಳು.

ಈಗ ಹವಾಲದಾರರು ಮುಂದುಗಾಣದಾದರು. ಬಾಗಿಲ ದೂಡಿ, ಒಳಗೆ ಹೋಗಬೇಕೆಂದರೆ, ಧೈರ್ಯವಾಗದು. ಕಮಲಾಬಾಯಿಯ ಮೇಲಿನ ಹಂಬಲವೂ ನಾಶವಾಗಲೊಲ್ಲದು. ಹ್ಯಾಗಾದರೂ ಮಾಡಿ, ಜುಲುಮೆಯಿಂದ ವಶಮಾಡಿಕೊಳ್ಳಬೇಕೆಂದರೆ; ಉಳಿದ ಇಬ್ಬರು ಪೋಲೀಸರ ಭಯವೊಂದು ಅವರ ಎದೆಯಲ್ಲಿ ಕಟಿಯುತ್ತಿತ್ತು; ಆದರೂ, ವಿಷಯಾಂಧರಾದ ಹವಾಲದಾರರು ಭಾವೀ ಅನರ್ಥಗಳ ಕಲ್ಪನೆಯನ್ನು ಬದಿಗೊತ್ತಿ, ಇಂಥ ಸುಸಂಧಿಯನ್ನು ಕಳೆದುಕೊಳ್ಳಬಾರದೆಂದು ದೃಢನಿಶ್ಚಯ ಮಾಡಿಕೊಂಡು, ಕಮಲಾಬಾಯಿಯನ್ನು ಕುರಿತು ವಿಕಟಸ್ವರದಿಂದ:— ಕಮಲೇ, ನಿನ್ನ ಬಾಕು ನನ್ನನ್ನೇನು ಮಾಡೀತು? ನಿನ್ನಂತೆ ನಾನೂ ನಿಂತರೆ, ಒಂದು ಅರಕ್ಷಣವಾದರೂ ಹಿಡಿಯುವಂತಿಲ್ಲ. ನನ್ನನ್ನು ಘಾಯಗೊಳಿಸಿದರೆ ಮುಂದೆ ನಿನ್ನ ಅವಸ್ಥೆ ಏನಾದೀತೆಂಬದನ್ನು ನೆನಿಸಿಕೋ. ಹೂಂ ಸರಿ ಹಿಂದಕ್ಕೆ, ಹೊತ್ತಾಗುವದು, ಎಂದು ನುಡಿದು, ಬಾಗಿಲ ಬಳಿಗೆ ಹೋದರು. ಕಮಲಾಬಾಯಿಯು ನಿಂತ ಸ್ಥಳದಿಂದ ಸ್ವಲ್ಪೂ ಸರಿಯಲಿಲ್ಲ. ಶಿಲಾಮೂರ್ತಿಯಂತೆ ಎವೆಯಿಕ್ಕದೆ ಬಾಕನ್ನು ಹಿಡಿದುಕೊಂಡು ಹಾಗೆಯೇ ನಿಂತು ಬಿಟ್ಟಿದ್ದಳು ಸಿಟ್ಟಿನಿಂದಲೂ, ಅಂಜಿಕೆಯಿಂದಲೂ ಅವಳ ಶರೀರವು

ಕಂಪಿಸುತ್ತಿತ್ತು. ಆಗ ಆಕೆಯು ಗಂಭೀರ ಸ್ವರದಿಂದ:—ಮೂರ್ಖರ್,
ನನ್ನ ಮುಂದಿನ ಅವಸ್ಥೆಯನ್ನು ನೆನಿಸಿಕೊಂಡೇ ಸಿದ್ಧಳಾಗಿ ನಿಂತಿರುವೆನು.
ಅಂಥ ವಿಪರೀತ ಪ್ರಸಂಗ ಬಂದರೆ ಮೊದಲು ನಿನ್ನನ್ನು ಕೊಂದು ಆ ಮೇಲೆ
ಇದೇ ಚೂರಿಯಿಂದ ನಾನೂ ಇರಿದುಕೊಂಡು ಬಿಡುವೆನು. ಆ ಮೇಲೆ
ಯಾರೇನು ಮಾಡುವರು? ಎಂದು ತಿರಸ್ಕಾರ ದೃಷ್ಟಿಯಿಂದ ಹವಾಲದಾರ
ರನ್ನು ನೋಡಿದಳು.

ಕಮಲಾಬಾಯಿಯ ಈ ಮಾತನ್ನು ಕೇಳಿ, ಹವಾಲದಾರರೂ ಹಂಗು
ದೊರೆದು ನಿಂತರು. ಕಾಮ-ಕ್ರೋಧಗಳಿಂದ ಅವರ ಬುದ್ಧಿಯು ಭ್ರಂಶ
ವಾಗಿ ಹೋಯಿತು; ಕಾಮವಾಸನೆಯು ಮಬ್ಬು ತಲೆಗೇರಿದ ಬಳಿಕ
ಕೇಳುವದೇನು? ಎಂಥ ಸುಶೀಲ ಮನುಷ್ಯನಿದ್ದರೂ ದುರಾಚಾರಿಯಾಗದೆ
ಇರಲಾರನು. ಈಗ ಕುಳಿಂದಸ್ವಾಮಿಯವರು ಹಿಂದು ಮುಂದಿನ ವಿಚಾರ
ವಿಲ್ಲದೆ ವಿಕಟ ಹಾಸ್ಯಮಾಡಿ:—ಕಮಲೇ, ಒಮ್ಮೆ ನಿನ್ನ ನಿಶ್ಚಲಮನಸ್ಸನ್ನು
ನೋಡಿಯೇ ಬಿಡುವೆನು. ಈ ದಿನ ನಿನ್ನ ಅಂಗಸುಖವನ್ನಾದರೂ ಹೊಂದ
ಬೇಕು; ಇಲ್ಲವೆ ಪ್ರಾಣವನ್ನಾದರೂ ಕೊಡಬೇಕು. ಎರಡರಲ್ಲೊಂದು
ಆಗಿಯೇ ತೀರಲಿ. ಇನ್ನು ಮೇಲೆ ನಿನ್ನ ಸತೀತ್ವವನ್ನು ರಕ್ಷಿಸಿಕೋ;
ಎಂದು ನುಡಿದು ಎದುರಿನ ಗೋಡೆಗೆ ತೂಗಹಾಕಿದ ಖಂಜೀರವನ್ನು
ತೆಗೆದುಕೊಳ್ಳುವದಕ್ಕಾಗಿ ಅವಸರದಿಂದ ನಡೆದರು; ಅಷ್ಟರಲ್ಲಿ ಹೊರಗಿನಿಂದ
ಯಾರೋ ಗಟ್ಟಿಯಾಗಿ "ಇನಸ್ಪೆಕ್ಟರ ಸಾಹೇಬರು ಬಂದರು;"ಎಂದು ಕೂಗಿ
ದರು. ಕೂಡಲೆ ಹವಾಲದಾರರ ಎದೆಯಲ್ಲಿ ತಣ್ಣೀರು ಸುರುವಿದಂತಾ
ಯಿತು. ಹೊರಗೆ ಬಂದು ನೋಡುವ ಧೈರ್ಯವೂ ಅವರಲ್ಲಿ ಉಳಿಯಲಿಲ್ಲ.
ಅಷ್ಟರೊಳಗೆ ಉಳಿದ ಇಬ್ಬರು ಪೋಲೀಸರೂ ಆ ಕೂಗನ್ನು ಕೇಳಿ ಗಡ
ಬಡಿಸಿ ಎದ್ದು ಕುಳಿತರು. ಈಗಂತೂ ಹವಾಲದಾರರು ವಿಚಾರಶೂನ್ಯ
ರಾಗಿ ನಿಂತುಬಿಟ್ಟರು! ಇಬ್ಬರು ಪೋಲೀಸರಲ್ಲಿ ಒಬ್ಬನು ಕಣ್ಣು ಒರಸಿ
ಕೊಳ್ಳುತ್ತ ಅವಸರದಿಂದ ಬಾಗಿಲವನ್ನು ತೆರೆದು ಹೊರಗೆ ಹೋಗಿ ನೋಡಿ
ದನು. ಅಲ್ಲಿ ಯಾರೂ ಇದ್ದಿಲ್ಲ; ಅವನು ನಗುತ್ತ ಒಳಗೆ ಬಂದು ಸುಮ್ಮನೆ
ನಿಂತುಕೊಂಡಿದ್ದ ಹವಾಲದಾರರನ್ನು ಕುರಿತು:—ಸ್ವಾಮಿಯವರೇ, ನಮ್ಮ
ಗೊಳ್ಳೇ ಮೋಸಮಾಡಿದಿರಲ್ಲಾ? ಇನಸ್ಪೆಕ್ಟರರು ಬಂದರೆಂದು ಸುಳ್ಳು
ಸುಳ್ಳೇ ಕೂಗಿ ಎಬ್ಬಿಸಬೇಕೇ? ಎಂದು ಕೇಳಿದನು.

ಈ ಮಾತಿಗೆ ಹವಾಲದಾರರು ಉತ್ತರ ಕೊಡದೆ, ಇಲ್ಲದ ಸುಳ್ಳು ನಗೆಯಿಂದ ನಕ್ಕು ಬಿಟ್ಟರು! ಇನಸ್ಪೆಕ್ಟರರು ಬಂದಿಲ್ಲವೆಂಬ ಸುದ್ದಿಯನ್ನು ಕೇಳಿ ಹಾಸಿಗೆಯ ಮೇಲೆ ಆಕಳಿಸುತ್ತ ಕುಳಿತುಕೊಂಡಿದ್ದ ಮತ್ತೊಬ್ಬ ಪೋಲೀಸನು:—ಹರಿಸಿಂಗ, ಏನು ಹಟಹಟ ಹಚ್ಚಿರುವಿರಿ? ಮಲಗಿಕೊಳ್ಳ ಬಾರದೇ? ಎಂದು ಬೇಸರದಿಂದ ನುಡಿದು, ಹಾಗೆಯೇ ಹಾಸಿಗೆಯ ಮೇಲೆ ಉರುಳಿಕೊಂಡು ಬಿಟ್ಟನು. ಹರಿಸಿಂಗನೆಂಬ ಪೋಲೀಸನೂ ಮಲಗಿಕೊಳ್ಳ ತಕ್ಕವನೇ; ಆದರೆ ಹವಾಲದಾರರ ಭಯಭೀತ ಮುದ್ರೆಯನ್ನು ನೋಡಿ ಯೂ ಮತ್ತು ಸುಮ್ಮನೆ ಹುಚ್ಚರಂತೆ ನಿಂತುಕೊಂಡದ್ದರಿಂದಲೂ ಅವನಿಗೆ ಸಂಶಯ ಬಂದು, ತುರಂಗದ ಕೋಣೆಯ ಕಡೆಗೆ ತಿರುಗಿ ನೋಡಿದನು. ಕಮಲಾಬಾಯಿಯು ಒಂದು ಮೂಲೆಯಲ್ಲಿ ಕುಳಿತಿದ್ದು, ಬಾಗಿಲದ ಒಂದು ಫಡಕು ಅರ್ಧ ತೆರೆದಿತ್ತು. ಕೂಡಲೆ ಅವನು ಹವಾಲದಾರರನ್ನುದ್ದೇಶಿಸಿ:—ಕುಳಿಂದಸ್ವಾಮಿಯವರೇ, ತುರಂಗದ ಬಾಗಿಲು ತೆರೆದಿರುವದಲ್ಲಾ! ಕೀಲಿಯ ಕೈ ಇನಸ್ಪೆಕ್ಟರರ ಕಡೆಗೆ ಇದ್ದಿಲ್ಲವೇ? ಎಂದು ಕೇಳಿದನು. ಇಷ್ಟರಲ್ಲಿಯೇ ಚಾಣಾಕ್ಷರಾದ ಹವಾಲದಾರರು ಉತ್ತರವನ್ನು ಸಿದ್ಧಮಾಡಿಯೇ ಇಟ್ಟುಕೊಂಡಿದ್ದರು. ಅವರು ಪೋಲೀಸನ ಪ್ರಶ್ನೆಗೆ:—ಹೌದು, ಇನಸ್ಪೆಕ್ಟರರ ಕಡೆಗೇ ಇರುವದು. ಹರಿಸಿಂಗ, ಏನು ಹೇಳಲಿ? ಈ ಕಮಲಾಬಾಯಿಯು ಆತ್ಮಹತ್ಯೆ ಮಾಡಿಕೊಳ್ಳಲಿಕ್ಕೆ ಆರಂಭಿಸಿದ್ದಳು. ಅದಕ್ಕಾಗಿಯೇ ನಾನು ಮೊಳೆಯಿಂದ ಕೀಲಿಯನ್ನು ತೆಗೆದು ಬಿಡಿಸಿದೆನು.

ಹರಿಸಿಂಗ (ಆಶ್ಚರ್ಯದಿಂದ):—ಏನಂದಿರಿ? ಆತ್ಮಹತ್ಯೆಮಾಡಿಕೊಳ್ಳಲಿಕ್ಕೆ ಹತ್ತಿದ್ದಳೇ? ಅವಳ ಹತ್ತರ ಯಾವ ಶಸ್ತ್ರವಿದೆ?

ಕುಳಿಂದ ಸ್ವಾಮಿಯವರು:—ಒಂದು ಹದನವಾದ ಬಾಕು ಇದೆ. ಅದರಿಂದಲೇ ಆತ್ಮಹತ್ಯೆ ಮಾಡಿಕೊಳ್ಳಲಿಕ್ಕೆ ಹತ್ತಿದ್ದಳು. ಆ ವೇಳೆಗೆ ಸರಿಯಾಗಿ, ನನಗೆ ಎಚ್ಚರವಾಗದಿದ್ದರೆ ಕೆಲಸವೆಲ್ಲ ಕೆಟ್ಟು ಹೋಗುತ್ತಿತ್ತು.

ಹರಿಸಿಂಗ:— ಸ್ವಾಮಿಯವರೇ, ಆ ಬಾಕು ಎಲ್ಲಿ ಅದೆ? ನನಗಿಷ್ಟು ದಯಮಾಡಿ ತೋರಿಸಿರಿ.

ಕುಳಿಂದಸ್ವಾಮಿಯವರು:—ಬಾಕು ಅವಳ ಹತ್ತರವೇ ಇದೆ. ಬೇಡಿದರೆ ಕೊಡಲೊಲ್ಲಳು. ಸ್ತ್ರೀಯರ ಮೈಮೇಲೆ ನುಗ್ಗಿ ಕಸಿದುಕೊಳ್ಳುವದು ಹ್ಯಾಗೆ, ನೀನೇ ಹೇಳು?

ಹರಿಸಿಂಗ:—ಕಸಿದುಕೊಳ್ಳುವದನ್ನು ಬಿಟ್ಟರೆ, ಮತ್ತೆ ಆತ್ಮಘಾತವನ್ನು ಮಾಡಿಕೊಳ್ಳುವಳಲ್ಲಾ! ಇದಕ್ಕೇನೆನ್ನುವಿರಿ?

ಕುಳಿಂದಸ್ವಾಮಿಯವರು:—ನಾನೊಬ್ಬನೇ ಮೈಮೇಲೆ ನುಗ್ಗಿ ಕಸಿದುಕೊಳ್ಳುವದು ಹೀನ ಸಂಶಯಕ್ಕೆ ಕಾರಣವೆಂದು ತಿಳಿದು, ಸುಳ್ಳು ಸುಳ್ಳೇ ಕೂಗಿ, ನಿಮ್ಮನ್ನು ಎಬ್ಬಿಸಿದೆನು. ತಿಳಿಯಿತೇ? ಎಂದು ನುಡಿದು ನಕ್ಕರು. ಕಮಲಾಬಾಯಿಯು ಇದನ್ನೆಲ್ಲವನ್ನೂ ಕೇಳಿಯೂ ಕೇಳದವಳಂತೆ ಸುಮ್ಮನಿದ್ದಳು. ಅಷ್ಟರಲ್ಲಿ ಶಿವನಂದಿಹವಾಲದಾರರೂ, ವಿನಾಯಕರಾಯರೂ, ಮುರಲೀಧರನನ್ನು ಕರೆದುಕೊಂಡು ಚಾವಡಿಗೆ ಬಂದರು. ಹಿಂದು ಮೂಲೆಯಲ್ಲಿ ಮುರಲಿಯನ್ನು ಕುಳ್ಳಿರಿಸಿ, ಅವರೆಲ್ಲರೂ ಮಾತಾಡುತ್ತ ಕುಳಿತುಕೊಂಡರು.

ಇತ್ತ ಮುರಲೀಧರನನ್ನು ನೋಡಿದ ಕೂಡಲೆ ಕಮಲಾಬಾಯಿಗೆ ಹಿಮ್ಮೆಲೆ ದುಃಖವು ಇಮ್ಮಡಿಸಿತು; ಆದರೂ ಹವಾಲದಾರರ ಅಂಜಿಕೆಯಿಂದ ಅದನ್ನು ತೋರಗೊಡದೆ ಉಸಿರ್ಗರೆಯುತ್ತ ಕುಳಿತುಕೊಂಡಳು. ಕಮಲಾಬಾಯಿಯ ಈ ದೀರ್ಘ ಉಚ್ಛ್ವಾಸವನ್ನು ಕೇಳಿ ಮುರಲೀಧರನು ತಿರುಗಿ ನೋಡಿದನು. ತನ್ನ ಪ್ರೀತಿಯ ಅತ್ತಿಗೆಯು ಶೋಕಿಸುತ್ತ ಕುಳಿತಿದ್ದಳು. ಆಗಿನ ಆ ಸುಂದರಾಂಗಿಯ ನಯನವಾರಿಗಳಿಂದ ಯುಕ್ತವಾದ ಬಾಡಿದ ಮುಖವನ್ನು ನೋಡಿ, ಮುರಲೀಧರನಿಗೂ ದುಃಖವು ತಡೆಯಲಿಲ್ಲ. ಹೀಗೆ ಇಬ್ಬರೂ ಪರಸ್ಪರರನ್ನು ನೋಡಿ ದುಃಖಿತರಾಗಿ ಅಳಹತ್ತಲು, ಮಾತಾಡುತ್ತ ಕುಳಿತುಕೊಂಡಿದ್ದ ಶಿವನಂದಿ ಹವಾಲದಾರರು ಮುರಲಿಯನ್ನುದ್ದೇಶಿಸಿ:—ಮುರಲೀ, ಬಾಯಿ ಮುಚ್ಚು. ಅಳಬೇಡ, ಎಂದು ಹೇಳಿ ಗರ್ಜಿಸಿ, ಕುಳಿಂದಸ್ವಾಮಿಯವರನ್ನು ಕುರಿತು:—ಕುಳಿಂದ ಸ್ವಾಮಿಯವರೇ, ಏಳಿರಿ. ಇನಸ್ಪೆಕ್ಟರರ ಅಪ್ಪಣೆಯ ಪ್ರಕಾರ ಮುರಲಿಯನ್ನು ಕಬೂಲ ಮಾಡಿಸೋಣ, ಎಂದು ಆ ಹುಂಬ ಹವಾಲದಾರರು ನುಡಿದರು. ಅದಕ್ಕೆ ಕುಳಿಂದಸ್ವಾಮಿಯವರು:—ಹಾಗೆಯೇ ಆಗಲಿ, ಚನ್ನಾಗಿ ಥಳಿಸಿ, ಗುಹ್ನೆಗೆ ಕಬೂಲ ಮಾಡಿಸೆಂದು ಇನಸ್ಪೆಕ್ಟರರೇ ಹೇಳಿದ ಮೇಲೆ ಅಂಜುವದೇಕೆ? ಏಳಿರಿ, ಮೊದಲು ಕಮಲಾಬಾಯಿಯ ಹತ್ತರ ಇರುವ ಆ ಬಾಕನ್ನು ಕಸಕೊಂಡು, ಆ ಮೇಲೆ ಮುರಲಿಯ ಸಮಾಚಾರವನ್ನು ತಕ್ಕೊಳ್ಳೋಣವಂತೆ, ಎಂದು ಹೇಳಿ ಎದ್ದು ನಿಂತರು.

ಕಮಲಾಬಾಯಿಯ ಕಡೆಗಿರುವ ಬಾಕನ್ನು ಬಲುಮೆಯಿಂದ ಕಸ ಕೊಳ್ಳುವದಾಯಿತು. ಆ ಮೇಲೆ ಹರಿಸಿಂಗನನ್ನು ಅಲ್ಲಿಯೇ ಬಾಗಿಲ ಹತ್ತರ ಕುಳ್ಳಿರಿಸಿ, ಮೂವರೂ ಕಮಲಾಬಾಯಿ-ಮುರಲೀಧರರನ್ನು ಕರೆದುಕೊಂಡು ಚಾವಡಿಯ ತೀರ ಹಿಂಬದಿಗಿರುವ ಖೋಲಿಗೆ ಹೋದರು. ಆ ಮೇಲೆ ಇಬ್ಬರೂ ಹವಾಲದಾರರು ತಮ್ಮ ತಮ್ಮ ನಡದೊಳಗಿನ ಬಡಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ಎದರುಬದುರಾಗಿ ಗೋಡೆಗೆ ಹೊಂದಿ ನಿಂತು ಕೊಂಡರು. ವಿನಾಯಕರಾಯರು ಕದವನ್ನು ಮುಚ್ಚಿ, ಅದಕ್ಕೆ ಆತು ಕೊಂಡು ನಿಂತರು.

ಇಷ್ಟೆಲ್ಲ ವ್ಯವಸ್ಥೆಯಾದಬಳಿಕ ಕುಳಿಂದಸ್ವಾಮಿಯವರು ಮುರಲೀ ಧರನಿಗೆ:—ಎಲೇ ಮುರಲೀ! ಇನ್ನಾದರೂ ಲಗು ಹೇಳು. ದಾಗಿನೆ ರೂಪಾಯಿ ಗಳನ್ನು ಎಲ್ಲಿ ಇಟ್ಟಿರುವೆ? ಈಗ ಹೇಳದಿದ್ದರೆ, ಈಕೋ ಇಲ್ಲಿ ನೋಡು, ಎಂದು ಗರ್ಜಿಸಿ, ಕೈಯೊಳಗಿನ ಬಡಿಗೆಯನ್ನು ತೋರಿಸಿದರು. ಇದೆಲ್ಲವನ್ನು ನೋಡಿ, ಅಂಜಿ ನಡುಗುತಲಿದ್ದ ಮುರಲೀಧರನ ಮುಖದಿಂದ ಅಕ್ಷರಗಳೇ ಹೊರಡ ಲಿಲ್ಲ. ಕೂಡಲೆ ಕುಳಿಂದಹವಾಲದಾರರು ಕಮಲಾಬಾಯಿಯನ್ನುದ್ದೇ ಶಿಸಿ:—ಕಮಲಾಬಾಯಿ, ಹೇಳು. ನೀನಾದರೂ ಹೇಳು. ಮುರಲಿಯು ದಾಗಿನೆ-ರೂಪಾಯಿಗಳನ್ನು ಎಲ್ಲಿ ಇಟ್ಟಿರುವನು? ಎಂದು ಕೇಳಿದರು. ಕಮಲಾಬಾಯಿಯೂ ಗಾಬರಿಯಾಗಿ ಸುಮ್ಮನಿರಲು, ಕುಳಿಂದಸ್ವಾಮಿಯ ವರು ಶಿವನಂದಿಹವಾಲದಾರರಿಗೆ ಸಂಜ್ಞೆ ಮಾಡಲು, ಅವರು ಬಡಿಗೆಯಿಂದ ಮುರಲೀಧರನನ್ನು ಹೊಡೆಯಹತ್ತಿದರು. ಮುರಲೀಧರನು ದಯಾಜನಕ ಧ್ವನಿಯಿಂದ ಚೀರುತ್ತ ಹಿಂದಕ್ಕೆ ಸರಿಯಹತ್ತಿದನು. ಹಿಂದಿನಿಂದ ಶಿವನಂದಿ ಯವರು ಹೊಡೆಯಹತ್ತಿದರು. ಈ ಮಗ್ಗಲು ಬಂದರೆ ಕುಳಿಂದಸ್ವಾಮಿ ಯವರೂ, ಆ ಮಗ್ಗಲು ಹೋದರೆ ಶಿವನಂದಿಯವರೂ ಹೊಡೆಯಹತ್ತಲು, ಮುರಲಿಯು ತೀರ ಜರ್ಜರನಾಗಿ, ತನ್ನ ಅಣ್ಣನ ಕಾಲುಗಳ ಮೇಲೆ ಬಿದ್ದು ದುಃಖದಿಂದ ಬಿಕ್ಕುತ್ತ:—ಅಣ್ಣಾ! ನನ್ನನ್ನು ಉಳಿಸಿಕೋ. ಸಾಯು ತ್ತೇನೆ. ಈ ಹೊಡತವನ್ನು ತಾಳಲಾರೆನು. ಕಣ್ಣಿಗೆ ಕತ್ತಲುಗೂಡಿಸು ತ್ತದೆ, ಎಂದು ಕರುಣಾಸ್ವರದಿಂದ ಹೇಳಿಕೊಂಡನು.

ನಿರ್ದಯರಾದ ವಿನಾಯಕರಾಯರು ಸ್ವಲ್ಪಾ ಅಂತಃಕರಣ ತಾಳದೆ, ಒಮ್ಮೆ ಜೋರಿನಿಂದ ತಮ್ಮನಿಗೆ ಒದೆದು:—ಹೊಲೆಯಾ, ಕಳವು ಮಾಡಿ,

ಬಿಡಿಸೆಂದು ಹೇಳಿಕೊಳ್ಳಲಿಕ್ಕೆ ಬರುತ್ತೀಯಾ? ಒಳ್ಳೇ ರೀತಿಯಿಂದ ದಾಗೀನೆ- ರೂಪಾಯಿಗಳನ್ನು ಕೊಡು; ಇಲ್ಲದಿದ್ದರೆ, ನಿನ್ನನ್ನು ಇಷ್ಟಕ್ಕೇ ಎಲ್ಲಿ ಬಿಡುವೆನು? ಎಂದು ನುಡಿದು ‹‹ಕರಕರ'' ಹಲ್ಲು ತಿನ್ನುತ್ತ ಶಿವನಂದಿ ಯವರ ಕೈಯೊಳಗಿನ ಬಡಿಗೆಯನ್ನು ತೆಗೆದುಕೊಂಡು ತಾವೂ ಹೊಡೆಯ ಹತ್ತಿದರು. ಕುಳಿಂದಸ್ವಾಮಿಯವರು ‹‹ಬಾಯಿಮುಚ್ಚು. ಒದರಬೇಡ'' ಎಂದು ಕೂಗುತ್ತ ಬಾಯಿಗೆ ಹೊಡೆಯುತ್ತಿದ್ದರು. ಬಳಲುತ್ತ ಬಿದ್ದು ಕೊಂಡ ಮುರಲೀಧರನಿಂದ ಏಳುವದಾಗಲಿಲ್ಲ. ಅವನು ಕಮಲಾಬಾಯಿ ಯನ್ನು ದೀನಮುದ್ರೆಯಿಂದ ನೋಡುತ್ತ:—ಕಮಲಕ್ಕಾ! ನೀನಾದರೂ ಬಿಡಿಸು. ಅವ್ವಾ, ತಾಳಲಾರೆನು! ತಾಳಲಾರೆನು!! ಅಣ್ಣಾ, ನನ್ನನ್ನು ಕೊಲ್ಲಬೇಡ ಬಿಡು. ಹವಾಲದಾರರೇ! ನಿಮ್ಮ ಕಾಲಿಗ ಬೀಳುತ್ತೇನೆ! ನೀವು ಹೇಳಿದಂತೆ ನಾನು ಕೇಳುತ್ತೇನೆ!! ಹೊಡೆಯಬೇಡಿರಿ. ನಾನು ಕಳವು ಮಾಡಿಲ್ಲ, ಎನ್ನಲು, ವಿನಾಯಕರಾಯರು ಕಮಲಾಬಾಯಿಯನ್ನು ವಕ್ರದೃಷ್ಟಿಯಿಂದ ನೋಡುತ್ತ:—ಆ ಭೋಸಡಿಯೇನು ಬಿಡಿಸುತ್ತಾಳೆ? ಅವಳ ಶ್ರಾದ್ಧವೂ ಇನ್ನು ಮೇಲಿದೆ. ಶಿವನಂದಿಯವರೇ, ತಗೊಳ್ಳಿರಿ. ಬಾಯಿಗೆ ಒದೆಯಿರಿ? ಪಕ್ಕಡಿಗೆ ಗುದ್ದಿರಿ! ಏನು ನೋಡುತ್ತೀರಿ? ಸತ್ತರೆ ನಾನು ಇದ್ದೇನೆ. ಇದರ ದೆಶೆಯಿಂದ ನನ್ನ ಮನೆ-ಮಾರು ಹಾಳಾಗಿ ಹೋಗಲಿ! ಇಕೋ, ಈ ಬಡಿಗೆಯನ್ನು ಹಿಡಿಯಿರಿ, ಎಂದು ನುಡಿದು, ಬಡಿಗೆಯನ್ನು ಕೊಟ್ಟು ಕಮಲಾಬಾಯಿಯ ಬಳಿಗೆ ಬಂದು, ಅವಳ ಸೀರೆಯ ಸೆರಗನ್ನು ಹಿಡಿದು:—ಕಮಲೀ, ನೋಡು! ಅಲ್ಲಿ ಮುರಲಿಯು ಹ್ಯಾಗೆ ಒದ್ದಾಡುತ್ತಾನೆ. ನಿನಗೂ ಹಾಗೆ ಮಾಡಬೇಕೋ ದಾಗೀನೆ-ರೂಪಾಯಿ ಗಳನ್ನು ಕೊಡುವಿಯೋ? ಮರ್ಯಾದೆಗೆಡಿಸಿ, ನಿನ್ನ ಫಜೀತಿ ಮಾಡಿ ಬಿಡುತ್ತೇನೆ ನೋಡು. ಹೂಂ ಲಗು ಹೇಳು, ಎಂದು ನುಡಿದು, ಕಪಾ ಳಕ್ಕೆ ಒಳ್ಳೇ ಭರದಿಂದ ಹೊಡೆದರು. ಅವಳ ಮೃದುವಾದ ಗಲ್ಲವು ಈ ಪೆಟ್ಟಿನ ಆಘಾತಕ್ಕೆ ಆರಕ್ತವಾಗಿ ಹೋಯಿತು. ನೋವು ತಾಳಲಾರದೆ ಅವಳು ಚೀರುತ್ತ ಮೂರ್ಛೆ ಬಂದು ನೆಲಕ್ಕೆ ಬಿದ್ದು ಬಿಟ್ಟಳು! ಆದರೂ, ಆ ಕಟುಕ ವಿನಾಯಕರಾಯರು ದಯೆಯಿಲ್ಲದೆ ಆ ಕೋಮಲಾಂಗಿಯನ್ನು ನೆಲದ ಮೇಲೆ ಎಳೆದಾಡುತ್ತ ಅವಾಚ್ಯ ಶಬ್ದಗಳಿಂದ ಬೈಯಹತ್ತಿದರು. ಇತ್ತ ಇಡೀ ದಿವಸ ಉಪವಾಸ ಬಳಲಿದ ಮುರಲೀಧರನ ಅವಸ್ಥೆಯಾದರೂ

ಹೀಗೆಯೇ ಆಗಿತ್ತು. ಕುಳಿಂದ ಹವಾಲದಾರರ ಹಿಂದು ಬಲವಾದ ಪೆಟ್ಟು ಪಕ್ಕಡಿಗೆ ಬಿದ್ದದರಿಂದ ಉಸುರು ಕಟ್ಟಿ ಹೋಗಿತ್ತು. ಇದೆಲ್ಲವನ್ನು ನೋಡಿ ಮೂವರೂ ಗಾಬರಿಯಾದರು. ಶಿವನಂದಿಯವರು ಅವಸರದಿಂದ ಹೊರಗೆ ಬಂದು ಹರಿಸಿಂಗನು "ನೀರು ಯಾತಕ್ಕೆ?" ಎಂದು ಕೇಳುತ್ತಿರಲು, ಹೇಳದೆ ಬಕೆಟ್ಟಿನೊಳಗಿನ ನೀರನ್ನು ಬೊಗಸೆಯಿಂದ ಒಯ್ದು, ಮುರಲೀಧರ-ಕಮಲಾಬಾಯಿಯರ ಮುಖದ ಮೇಲೆ ಉಗ್ಗಿದರು. ಚನ್ನಾಗಿ ಗಾಳಿ ಬೀಸುವಂತೆ ಬಾಗಿಲ-ಕಿಡಿಕೆಗಳನ್ನು ತೆರೆದು, ಎಲ್ಲರೂ ಹೊರಗೆ ಬಂದು ಬಿಟ್ಟರು.

ಕೆಲ ಹೊತ್ತಿನ ಮೇಲೆ ಕಮಲಬಾಯಿಯು ಎಚ್ಚತ್ತಳು. ಕೋಮಲ ಶರೀರದ ಮುರಲೀಧರನು ಸ್ಮೃತಿದಪ್ಪಿ ಅಸ್ತವ್ಯಸ್ತವಾಗಿ ಬಿದ್ದುದನ್ನು ನೋಡಿ, ಅವಳಿಗೆ ಪರಮಾವಧಿ ಕಷ್ಟವೆನಿಸಿತು; ಆದರೂ, ಅದನ್ನು ನುಂಗಿಕೊಂಡು, ಸಾವಕಾಶವಾಗಿ ಮುರಲೀಧರನ ಹತ್ತರಬಂದು ಕುಳಿತು ಅಂಗಿಯ ಬಿರಿಡಿಗಳನ್ನು ಬಿಚ್ಚಿ, ಬಂಧುಪ್ರೇಮದಿಂದ ತನ್ನ ಸೀರೆಯ ಸೆರಗಿನಿಂದ ಗಾಳೀ ಬೀಸಹತ್ತಿದಳು. ಬೀಸುತ್ತ, ಬೀಸುತ್ತ, ದುಃಖವೇಗವನ್ನು ತಾಳಲಾರದ ಅವಳು, ಬಾಯಲ್ಲಿ ಸೀರೆಯನ್ನು ತುಂಬಿಕೊಂಡು ಹಿಂದೇಸವನೆ ಕಣ್ಣೀರು ಸುರಿಸಹತ್ತಿದಳು; ಕಮಲಾಬಾಯಿಯು ಉಪಚಾರ ಮಾಡುತ್ತ ಹೋದಂತೆ ಮುರಲೀಧರನಿಗೆ ಎಚ್ಚರವಾಯಿತು. ಅವನು ನರಳುತ್ತ ಎದ್ದು ಕುಳಿತು:—ಕಮಲಕ್ಕಾ! ನೀರು ಕೊಡು. ಗಂಟಲಾರಿ ಮಾತಾಡಲಿಕ್ಕೆ ಬರಲೊಲ್ಲದು. ಅಕ್ಕಾ! ಈ ಸಂಕಟವನ್ನು ತಾಳಲಾರೆನು. ಇಕೋ, ನೋಡು. ಬೆನ್ನಮೇಲೆ ಹ್ಯಾಗೆ ಬಾಸಾಳಗಳೆದ್ದಿವೆ! ಅಯ್ಯೋ! ಕಳವು ಮಾಡದ ನಾನು ಇವರಿಗೆ ಏನೆಂದು ಹೇಳಲಿ! ಅಣ್ಣನಿಗೆ ಎಲ್ಲವೂ ಗೊತ್ತಿದ್ದರೂ ಹೀಗೆ ಮಾಡಬೇಕೇ? ಕಮಲಕ್ಕಾ!! ಇನ್ನು ನಾನು ಉಳಿಯಲಾರೆನು. ಹೊಟ್ಟೆಯಲ್ಲಿ ಕೆಟ್ಟ ಸಂಕಟವಾಗುತ್ತದೆ. ರಜನೀಕಾಂತಣ್ಣನಿದ್ದರೆ, ನಮ್ಮ ಗತಿ ಇಷ್ಟೆಲ್ಲಿ ಆಗುತ್ತಿತ್ತು? ಎಂದು ನುಡಿದು, ಕಮಲಾಬಾಯಿಯ ಕುತ್ತಿಗೆಗೆ ತೆಕ್ಕೆಬಿದ್ದು ದೊಡ್ಡ ಧ್ವನಿತೆಗೆದು ಅಳಹತ್ತಿದನು. ಈ ಅಳುವ ಸ್ವರವನ್ನು ಕೇಳಿ, ವಿನಾಯಕಯರೂ ಇಬ್ಬರು ಹವಾಲರರೂ ಒಳಗೆ ಬಂದರು.

ಆ ಮೇಲೆ ಕುಳಿಂದ ಹವಾಲದಾರರು ಮುರಲೀಧರನ ರಟ್ಟೆಯನ್ನು ಹಿಡಿದು ದರದರ ಎಳೆಯುತ್ತ ಹೊರಗೆ ತಂದು:—ಕಳ್ಳಾ, ಡೋಕಾರಿ

ತನ ತೆಗೆದು ಬೀಳಲಿಕ್ಕೆ ನಿನಗೇನಾಗಿತ್ತು? ಬಿದ್ದರೆ, ಬಿಡುವರೆಂದು ತಿಳಿದಿರು ವೆಯಾ? ಹೇಳು. ಕಳವಿನ ಮಾಲನ್ನು ಎಲ್ಲಿ ಇಟ್ಟಿರುವೆ? ಯಾಕೆ, ಸುಮ್ಮನೆ ನಿಂತುಕೊಂಡಿ? ಸರಿ ಹಿಂದಕ್ಕೆ ಕಂಬಕ್ಕೆ. ಬೆನ್ನು ಆನಿಸಿ, ನೆಟ್ಟಗೆ ನಿಲ್ಲು. ಏ ಕಮಲೀ, ಬಾ ಇಲ್ಲಿ. ನೀನು ಇವನ ಎದುರಿಗೆ ನೋಡುತ್ತ ನಿಲ್ಲು. ಹಿಂದು ತುಟಿ ಎರಡು ಮಾಡಿದರೆ, ನಿನ್ನ ಅವಸ್ಥೆ ನೆಟ್ಟಗಾಗಲಿಕ್ಕಿಲ್ಲ, ಎಂದು ಗರ್ಜಿಸಿ ಕಮಲಾಬಾಯಿಯ ಮುಖವನ್ನು ವಕ್ರದೃಷ್ಟಿಯಿಂದ ನೋಡುತ್ತ ನಿಂತರು. ಹರಿಸಿಂಗಸಿಪಾಯಿಯು ಹಗ್ಗದಿಂದ ಮುರಲೀಧರನ ಕೈಗಳನ್ನು ಹಿಂಬದಿ ಯಿಂದ ಕಂಬಕ್ಕೆ ಕಟ್ಟಿದನು.

ಈಗ ಕಮಲಾಬಾಯಿಯು ದುಃಖದಿಂದ ಜರ್ಜರಳಾಗಿ ಶಿವನಂದಿ ಹವಾಲದಾರರನ್ನು ಕುರಿತು:—ಹವಾಲದಾರರೇ, ಮುರಲಿಯನ್ನು ಯಾಕೆ ಹೊಡೆಯುತ್ತೀರಿ? ಈ ಇಡೀ ದಿವಸ ಅವನಿಗೆ ಕೂಳಿಲ್ಲ. ನಿಮ್ಮ ದಾಗೀನೆ-ರೂಪಾಯಿಗಳು ಹೋಗಿದ್ದರೆ ನಮ್ಮ ತಂದೆಯವರ ಕಡೆಯಿಂದ ಅದರ ಎರಡಷ್ಟು ಬೆಲೆಯನ್ನು ಕೊಡಿಸುತ್ತೇನೆ. ಅವನನ್ನು ಬಿಟ್ಟುಬಿಡಿರಿ. ಅವನು ಕಳವು ಮಾಡಿಲ್ಲ. ವಿನಾಯಕರಾಯರೇ, ನಿಮಗಾದರೂ ಅಂತಃ ಕರಣ ಬರಲೊಲ್ಲದೇ! ತಮ್ಮನ ಮೇಲೆ ಸ್ವಲ್ಪಾದರೂ ದಯಾಬುದ್ಧಿಯನ್ನು ತಾಳಿರಿ. ಕಳವು ಮಾಡದ ಅವನಿಗೆ ಎಷ್ಟು ಹೊಡೆದರೂ ಅದರಿಂದ ಯಾವ ಪ್ರಯೋಜನವೂ ಆಗದು. ಅವನ ಮೇಲೆ ನಿಮ್ಮ ದ್ವೇಷವಿದ್ದರೆ, ಒಮ್ಮೆಲೆ ಕುತ್ತಿಗೆ ಹಿಚುಕಿ ಬಿಡಿರಿ. ಹೀಗೆ ವಿಲಿವಿಲಿಯಾಗಮಾಡಬೇಡಿರಿ. ಶಿವ ಶಿವಾ! ಎಂಥ ಹೊತ್ತನ್ನು ತಂದೆ? ಅಂಥ ಯಾವ ತಪ್ಪು ನಮ್ಮಿಂದ ಘಟಿ ಸಿರಬಹುದು? ಈ ಸಂಕಟದೊಳಗಿಂದ ನಮ್ಮನ್ನು ಪಾರು ಮಾಡುವವರು ಯಾರೂ ಇಲ್ಲದಾಯಿತೇ! ಹಾಯ್! ಹಾಯ್!! ಇದೇನು? ಮತ್ತೆ ಇವ ನನ್ನು ಕಂಬಕ್ಕೆ ಕಟ್ಟಿ, ಮರ್ಯಾದೆಗೇಡು ಮಾಡುವಿರೋ! ಹವಾಲದಾರ ಸಾಹೇಬರೇ, ಮರ್ಯಾದೆಗೇಡು ಮಾಡಬೇಡಿರಿ. ಅದನ್ನು ನೋಡಲಾ ರೆನು. ನನ್ನ ಸರಿಯ ಅಕ್ಕ-ತಂಗಿಯರು ನಿಮಗಿಲ್ಲವೇ? ಇಷ್ಟು ಗೋಳಾ ಡಿಸುವದಕ್ಕಿಂತ ಯಾತರಿಂದಾದರೂ ಇರಿದು ಕೊಂದು ಬಿಡಿರಿ; ಇಲ್ಲವೆ ನನ್ನ ಬಾಕನ್ನು ನನಗೆ ಕೊಟ್ಟುಬಿಡಿರಿ. ಅಂದರೆ ಇವೆಲ್ಲ ದುಃಖಗಳಿಂದ ನೀಗಿಕೊಳ್ಳುತ್ತೇನೆ. ಆಯಿತು, ಅತ್ಯಾಚಾರದ ಪರಮಾವಧಿಯಾಯಿತು! ವಿನಾಯಕರಾಯರೇ! ನೋಡಿರಿ! ಚನ್ನಾಗಿ ನೋಡಿರಿ!! ಬಂಧುವಿನ ಯುಷ್ಟು

ಯಾತನೆಯನ್ನು ಕಣ್ಣು ತುಂಬಾ ನೋಡಿರಿ!!! ಕಮಲೇ! ಹತಭಾಗ್ಯಳಾದ ಕಮಲೆ!! ಎಂಥ ಹೊತ್ತಿನಲ್ಲಿ ನಿನ್ನ ಮಾನರಕ್ಷಣೆಯ ಸಾಧನವನ್ನು ಕಳೆದುಕೊಂಡೆ? ಈ ಹೊತ್ತಿನಲ್ಲಿ ಅದು ನಿನ್ನ ಹತ್ತರ ಇದ್ದರೆ, ಹೃದಯವನ್ನು ಪ್ರವೇಶಿಸಿ, ನಿನ್ನ ನಿರ್ಮಲತೆಯನ್ನು ಇವರೆಲ್ಲರಿಗೂ ಪ್ರತ್ಯಕ್ಷ ತೋರಿಸುತ್ತಿತ್ತು. ಆತ್ಮಘಾತವು ಮಹಪಾಪಕರವೆಂದು ಬಿಟ್ಟದ್ದರ ಫಲವಿದು. ಅಳು! ಚನ್ನಾಗಿ ಅಳು!! ನೀನು ಅತ್ತಷ್ಟು ವಿನಾಯಕರಾಯರಿಗೆ ಸಂತೋಷವಾಗುವದು. ನಿನ್ನ ಪ್ರೀತಿಯ ಮೈದುನನ ದುರವಸ್ಥೆಯನ್ನು ಕಂಡು, ನಿನಗೆ ದುಃಖವಾಗುವದೇನು? ದುಃಖವಾಗುವಂತಿದ್ದರೆ, ಅದನ್ನು ಯಾಕೆ ನೋಡಬೇಕು? ವಿನಾಯಕರಾಯರೇ! ಹೂಂ, ತಗೊಳ್ಳಿರಿ. ಯಾಕೆ? ಸುಮ್ಮನೆ ನಿಂತಿರಿ? ನಿರಪರಾಧಿಯಾದ ತಮ್ಮನ ಸೇಡು ತೀರಿಸಿಕೊಂಡು ಕೃತಕೃತ್ಯರಾಗಿರಿ ನೀವು ಬೇಕಾದಂಥ ನೀಚಕೃತಿಯನ್ನು ಮಾಡಿದರೂ ಈ ಕಮಲೆಯು ನೋಡಳು; ಎಂದು ದುಃಖಮಿಶ್ರಿತ ಹೃದಯದ್ರಾವಕ ಸ್ವರದಿಂದ ಮಾತಾಡಿ, ಎರಡೂ ಕೈಗಳಿಂದ ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡಳು.

ಕಮಲಾಬಾಯಿ-ಮುರಲೀಧರರ ಈ ಶೋಚನೀಯ ಸ್ಥಿತಿಯನ್ನು ನೋಡಿ, ಶಿವನಂದಿಕವಾಲದಾರರಿಗೆ ಕನಿಕರ ಬಂದಿತು. ಅವರು ಕುಳಿಂದಸ್ವಾಮಿಯವರಿಗೂ ವಿನಾಯಕರಾಯರಿಗೂ ಬಹಳವಾಗಿ ಹೇಳಿದರು; ಆದರೂ ಅವರು ಕೇಳಲಿಲ್ಲ. ಇನಸ್ಪೆಕ್ಟರರು "ಹೊಡೆ" ಯೆಂದು ಹೇಳಿದ್ದನ್ನು ಇವರ ಮುಂದೆ ನಾನೇಕೆ ಹೇಳಿದೆನೋ ಎಂದು ಮಿಡುಕುತ್ತ, ಒಂದು ಕಡೆಗೆ ಸುಮ್ಮನೆ ಕುಳಿತುಕೊಂಡು ಬಿಟ್ಟರು.

ಇತ್ತ ಕುಳಿಂದಸ್ವಾಮಿಯವರು ಮುರಲೀಧರನು ಉಟ್ಟುಕೊಂಡ ಧೋತರವನ್ನು ಎಡಗೈಯಿಂದ ಹಿಡಿದುಕೊಂಡು:—ಹೊಲೆಯಾ, ಇನ್ನಾದರೂ ಕಳವಿನ ಮಾಲನ್ನಿಟ್ಟ ಜಾಗೆಯನ್ನು ಹೇಳು; ಇಲ್ಲದಿದ್ದರೆ, ನಿನ್ನ ಅತ್ತಿಗೆಯ ಎದುರಿಗೆ ನಿನ್ನ ಮರ್ಯಾದೆಗೇಡು ಮಾಡುತ್ತೇವೆ ನೋಡು; ಎಂದು ಗರ್ಜಿಸುತ್ತ ಕೈಯೊಳಗಿನ ಬಡಿಗೆಯ ಹಿಡಿಕೆಯಿಂದ ಮೊಳಕೈ ಮೊಳಕಾಲುಗಳಿಗೆ ತಿವಿಯಹತ್ತಿದರು. ಈಗ ಮುರಲೀಧರನು ಅನೇಕ ಬಗೆಯಾಗಿ ಹಲುಬಿ ಹಂಬಲಿಸಿದನು. ತಂದೆ-ತಾಯಿಗಳ ಹೆಸರಿನಿಂದ ಕೂಗಿಕೊಂಡನು ದೇವರಿಗೆ ಮೊರೆಯಿಟ್ಟನು. ಕಲ್ಮರಗಳು ಕರಗುವಂತೆ

ಕೊರಗಿಕೊಂಡರೂ, ಕಮಲಾಬಾಯಿಯ ಹೊರತು ಅಲ್ಲಿ ಇದ್ದವರಿಗೆ ಯಾರಿಗೂ ದಯಬರಲಿಲ್ಲ; ಆದರೆ, ಇದೆಲ್ಲವನ್ನು ಹೊರಗೆ ದೂರದಲ್ಲಿ ನಿಂತು ಕೊಂಡು ನೋಡುವ ಒಂದು ವ್ಯಕ್ತಿಯು ಮಾತ್ರ ಕಣ್ಣೀರು ಸುರಿಸುತ್ತಲಿತ್ತು; ಇಷ್ಟಾದರೂ ವಿನಾಯಕರಾಯರಿಗೆ ತೃಪ್ತಿಯಾಗಲಿಲ್ಲ. ಈಗಂತೂ ಅವರು ಪಿಶಾಚಿಯಂತೆ ಗಹಗಹಿಸಿ ನಗುತ್ತ:—"ಹೂಂ ಗುದ್ದಿರಿ! ತಿವಿಯಿರಿ!! ಕುತ್ತಿಗೆ ಹಿಚುಕಿರಿ!!! ಬಿಡಬೇಡಿರಿ" ಎಂದು ಹೇಳುತ್ತಲೇ ಇದ್ದರು. ಈಗೆ ಮಾತ್ರ ಮುರಲೀಧರನು ಅಸಹ್ಯವಾದ ಆ ನೋವನ್ನು ತಾಳಲಾರದೆ:— ಅಣ್ಣಾ, ದಾಗೀನೆ-ರೂಪಾಯಿಗಳು ಮನೆಯಲ್ಲಿ ಅವೆ. ಕೊಡುತ್ತೇನೆ. ಬಿಡಿಸು. ಹೊಡಿಸಬೇಡ; ಎಂದು ಹೇಳಿಕೊಳ್ಳಹತ್ತಿದನು. ಇದನ್ನು ಕೇಳಿ, ಹವಾಲದಾರರು ಕೆಂಪಡರಿದ ಕಣ್ಣುಗಳನ್ನು ಕಿಸಿದು:—ಇದನ್ನು ನೋಡು; ಕೈಯೊಳಗಿನ ಬಡಿಗೆಯನ್ನು. ಸುಳ್ಳು ಹೇಳಬೇಡ. ಮನೆ ಯಲ್ಲಿ ಎಂಥಲ್ಲಿ ಇಟ್ಟಿರುವೆ? ಎಂದು ಕೇಳಿದರು. ಮುರಲೀಧರನು ಕುಂಠಿತ ಸ್ವರದಿಂದ ತಪ್ಪುತ್ತ ತಡೆಯುತ್ತ:—ಕಪಾಟನಲ್ಲಿ ಇಲ್ಲ! ಇಲ್ಲ!! ಕುಳ್ಳಿನ ಸಂದಿಯಲ್ಲಿ ಇಟ್ಟಿರುವೆನು. ಕೊಡುತ್ತೇನೆ. ಬಿಡಿರಿ; ಎಂದು ಹೇಳಲು, ಕಟ್ಟಿದ ಹಗ್ಗವನ್ನು ಉಚ್ಚಿದರು.

ಮುರಲೀಧರನಿಗೆ ನಿಂತುಕೊಳ್ಳುವಷ್ಟು, ಶಕ್ತಿ ಇದ್ದಿಲ್ಲ ಬಿರುಗಾಳಿ ಯಿಂದ ಹೊಯ್ದಾಡಿ ಧರೆಗುರುಳುವ ಬಾಳೆಯ ವೃಕ್ಷದಂತೆ ಜೋಲಿ ಹೊಡೆಯುತ್ತ ನೆಲದಮೇಲೆ ಬಿದ್ದುಬಿಟ್ಟನು! ಕೂಡಲೆ ಕಮಲಾಬಾಯಿಯು ಧಾವಿಸಿ ಬರುವಷ್ಟರಲ್ಲಿ ವಿನಾಯಕರಾಯರು:—ಹೂಂ ಏಳು. ಯಾಕೆ ಬಿದ್ದುಕೊಂಡೆ? ಏಳುವಿಯೋ ಒದೆಯಲೋ? ಎಂದು ಕಾಲು ಎತ್ತಲು, ಮುರಲೀಧರನು ಥರಥರ ನಡಗುತ್ತ:—ಅಣ್ಣಾ, ಸ್ವಲ್ಪ ಸಮಾಧಾನ ತಾಳು. ಏಳಲಿಕ್ಕೆ ಬರಲೊಲ್ಲದು. ಹೊಟ್ಟೆಯಲ್ಲಿ ಕಸವಿಸಿಯಾಗುತ್ತದೆ, ಎಂದು ಹೇಳಿಕೊಂಡನು. ವಿನಾಯಕರಾಯರಿಗೆ ಆಗ ಯಾವ ದೇವರು ಬುದ್ಧಿಯನ್ನು ದಯಪಾಲಿಸಿದನೋ ತಿಳಿಯದು! ತಮ್ಮ ಜೇಬಿನೊಳಗಿಂದ ಒಂದು ರೂಪಾಯಿಯನ್ನು ತೆಗೆದು, ಹರಿಸಿಂಗನ ಕೈಯಲ್ಲಿ ಕೊಟ್ಟು, ಫಲಾಹಾರ ತರಲಿಕ್ಕೆ ಹೇಳಿದರು. ಹರಿಸಿಂಗನು ಓಡುತ್ತ ಹೋಗಿ ಸಮೀಪದ ಒಬ್ಬ ಅಂಗಡಿಯವನನ್ನು ಕೂಗಿ ಎಬ್ಬಿಸಿ, ಫಲಾಹಾರ ತಂದನು. ವಿನಾಯಕ ರಾಯರು ಕಮಲಾಬಾಯಿ-ಮುರಲೀಧರರಿಗೆ ತಿನ್ನಲಿಕ್ಕೆ ಹೇಳಿ, ತಾವೆಲ್ಲರೂ

ಮತ್ತೊಂದು ಕಡೆಗೆ ಕುಳಿತುಕೊಂಡರು. ಚಾವಡಿಯಲ್ಲಿ ಇಷ್ಟೊತ್ತಿನವರೆಗೆ ಇಷ್ಟು ಗೊಂದಲವು ನಡೆದಿದ್ದರೂ ಮಲಗಿಕೊಂಡಿದ್ದ ಗುರುಶಾಂತಪ್ಪನೆಂಬ ಸಿಪಾಯಿಗೆ ಎಚ್ಚರವಾಗಲಿಲ್ಲ. ಈಗ ಕುಳಿಂದಸ್ವಾಮಿಯವರು ನಾಲ್ಕು ಬೈದು ಅವನನ್ನು ಎಬ್ಬಿಸಿ, ಇನಸ್ಪೆಕ್ಟರರಿಗೆ ಈ ಸುದ್ದಿಯನ್ನು ತಿಳಿಸಲಿಕ್ಕೆ ಅಟ್ಟಿದರು. ಗುರುಶಾಂತಪ್ಪನು ನಿದ್ರೆಯ ಮಬ್ಬಿನಲ್ಲಿ ಏನೇನೋ ಹಿಟಗುಟ್ಟುತ್ತ ಇನಸ್ಪೆಕ್ಟರರ ಮನೆಯ ಹಾದೀ ಹಿಡಿದನು.

ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಇನಸ್ಪೆಕ್ಟರ ಸಾಹೇಬರು ಬಂದರು. ಆಗ ಕಮಲಾಬಾಯಿ-ಮುರಲೀಧರರ ಫಲಾಹಾರವು ಇನ್ನೂ ಮುಗಿದಿದ್ದಿಲ್ಲ. "ಹೂಂ, ಲಗು ಲಗು ತಿನ್ನಿರಿ" ಎಂದು ಅವರಿಗೆ ಹಿಂದೇಸವನೆ "ಕಿರಿ ಕಿರಿ" ಮಾಡುತ್ತಲಿದ್ದ ಕುಳಿಂದಸ್ವಾಮಿಯವರಿಗೆ ದಯಾವಂತರಾದ ಇನಸ್ಪೆಕ್ಟರರು ಹಿಳಿತಾಗಿ ಸಿಟ್ಟು ಮಾಡಿ, ಖುರ್ಚಿಯಮೇಲೆ ಕುಳಿತುಕೊಂಡರು. ಹವಾಲದಾರರೂ ವಿನಾಯಕರಾಯರೂ ಎಲ್ಲ ಸಂಗತಿಯನ್ನು ಹೇಳಿದರು; ಆದರೆ, ಮುರಲೀಧರನಿಗೆ ಹೊಡೆದದ್ದನ್ನು ಮಾತ್ರ ಹೇಳಲಿಲ್ಲ. ಇನಸ್ಪೆಕ್ಟರ ಸಾಹೇಬರು ಕಮಲಾಬಾಯಿಯಿಂದ ಸಿಕ್ಕ ಚಾಕನ್ನು ಕೈಯಲ್ಲಿ ಹಿಡಿದುಕೊಂಡು ದಿಟ್ಟಿಸಿ ನೋಡುತ್ತ, ಮನದಲ್ಲಿಯೇ :—ಕಮಲಾಬಾಯಿಯು ಸುಶಿಕ್ಷಿತಳಿದ್ದು ಆತ್ಮಹತ್ಯೆ ಮಾಡಿಕೊಳ್ಳಲಿಕ್ಕೆ ಉದ್ಯುಕ್ತಳಾಗಲು ಕಾರಣವೇನಿರಬಹುದು? ಎಂದು ಯೋಚಿಸಹತ್ತಿದರು. ಅಷ್ಟರಲ್ಲಿಯೇ ಕಮಲಾಬಾಯಿ-ಮುರಲೀಧರರ ಫಲಾಹಾರವು ಮುಗಿಯಿತು. ಇನಸ್ಪೆಕ್ಟರ ಸಾಹೇಬರು ತಮ್ಮ ಯೋಚನೆಯನ್ನು ಅಷ್ಟಕ್ಕೇ ಮುಗಿಸಿ, ಮಾಲು ಜಪ್ತ ಮಾಡುವದಕ್ಕೆ ಹೊರಡಲು ಸಿದ್ಧರಾದರು. ಈ ಮೊದಲೇ ಎರಡು ಟಾಂಗೆಗಳು ತಯಾರಾಗಿ ನಿಂತಿದ್ದವು. ಹಿಂದು ಟಾಂಗೆಯಲ್ಲಿ ಮುರಲೀಧರ-ಕಮಲಾಬಾಯಿಯನ್ನು ಕೂಡ್ರಿಸಿದರು. ಇನ್ನೊಂದರಲ್ಲಿ ಇನಸ್ಪೆಕ್ಟರ ಹಾಗು ವಿನಾಯಕರಾಯರು ಕುಳಿತರು. ಟಾಂಗೆಗಳು ಭರದಿಂದ ಸಾಗಲು, ಕುಳಿಂದ ಹವಾಲದಾರರೂ, ಹರಿಸಿಂಗ ಸಿಪಾಯಿಯೂ ಕಮಲಾಬಾಯಿ-ಮುರಲೀಧರರನ್ನು ಮನದಲ್ಲಿ ಬೈಯುತ್ತ ಟಾಂಗೆಗಳ ಬೆನ್ನುಹತ್ತಿ ಓಡುತ್ತ ನಡೆದರು.

ಇನಸ್ಪೆಕ್ಟರ ಸಾಹೇಬರು ಚಾವಡಿಯಿಂದ ಮುರಲೀಧರನ ಮನೆಗೆ ಹೊರಟಾಗ್ಗೆ ರಾತ್ರಿ ಮೂರು ಗಂಟೆಯ ಸಮಯವಾಗಿತ್ತು. ಜಗತ್ತೆಲ್ಲ ನಿದ್ರಾಪರವಶವಾಗಿತ್ತು. ನಮ್ಮ ಸೀತಮ್ಮನು ಮಾತ್ರ ನಡುಮನೆಯಲ್ಲಿ

ದೀಪದೆದುರಿಗೆ ಅಳುತ್ತ ಕುಳಿತಿದ್ದಳು. ಅಷ್ಟರಲ್ಲಿ ಇನಸ್ಪೆಕ್ಟರರು ಅವರ ಮನೆಯನ್ನು ಮುಟ್ಟಿ ಸೀತಾಬಾಯಿಯನ್ನು ಕೂಗಿದರು. ಆಗ ಮುಂದು ಗಡೆ ಮಲಗಿದ್ದ ಮಹಾದೇವಪ್ಪನವರು ಎದ್ದು ಬಾಗಿಲ ತೆರೆಯಲು, ಕಮ ಲಾಬಾಯಿ ಮೊದಲುಮಾಡಿಕೊಂಡು ಎಲ್ಲರೂ ಒಳಗೆ ಬಂದರು. ಮಹಾ ದೇವಪ್ಪನವರನ್ನು ನೋಡಿ, ವಿನಾಯಕರಾಯರು ಮತ್ಸರಬುದ್ಧಿಯಿಂದ ಇನಸ್ಪೆಕ್ಟರರಿಗೆ:— ಈ ಕಳವಿನಲ್ಲಿ ಮಹಾದೇವಪ್ಪನ ಅಂಗವೂ ಇದ್ದಂತೆ ತೋರುತ್ತದೆ; ಎಂದು ಹೇಳಿದರು. ಇದನ್ನು ಕೇಳಿ ಇನಸ್ಪೆಕ್ಟರರು:— ವಿನಾಯಕರಾವ, ನಿಮ್ಮೊಬ್ಬರ ಮನೆಯಲ್ಲಿ ಕಳವು ಆದರೆ, ಈ ಮನೆಗೆ ಬರಹೋಗುವವರು ಸಹ ನಿಮಗೆ ಕಳ್ಳರಾಗಿ ಕಾಣುತ್ತಾರೇನು? ಎಂದು ಪಕ್ಷಪಾತವಿಲ್ಲದೆ ನುಡಿದು, ಆ ಮೇಲೆ ಮುರಲೀಧರನಿಗೆ:— ಮುರಲೀ, ಕುಳ್ಳಿನ ಗುಂಪಿಯು ಎಲ್ಲಿದೆ? ತೋರಿಸು ನಡೆ, ಎಂದು ಹೇಳಿದರು. ಮುರಲೀ ಧರನು ಮುಂದೆ ಮುಂದೆ ನಡೆದು ಹಿತ್ತಲಬಾಗಿಲದ ಎಡಮಗ್ಗಲಿಗಿರುವ ಕುಳ್ಳಿನ ಗುಂಪಿಯನ್ನು ತೋರಿಸಿದನು. ಕುಳಿಂದ ಸ್ವಾಮಿಯವರು ಆ ಗುಂಪಿಯನ್ನು ತಿರುವಿ ಹಾಕಿದರು. ಅದರಲ್ಲಿ ಒಂದು ಚೇಳಿನ ಹೊರ್ತು ಮತ್ತೆ ಏನೂ ಸಿಗಲಿಲ್ಲ. ಇದನ್ನು ನೋಡಿ ಇನಸ್ಪೆಕ್ಟರರು ಸಂತಪ್ತರಾಗಿ, ಕುಳಿಂದ ಸ್ವಾಮಿಯವರನ್ನು ದಿಟ್ಟಿಸಿ ನೋಡುತ್ತ:— ಎಲ್ಲಿದೆ, ಮಾಲು? ಎಂದು ಕೇಳಿದರು. ಕುಳಿಂದಸ್ವಾಮಿಯವರು ಪ್ರತ್ಯುತ್ತರ ಕೊಡದೆ ಸಮೀಪದಲ್ಲಿದ್ದ ಮುರಲಿಯ ಬೆನ್ನ ಮೇಲೆ ಒಮ್ಮೆ ಗುದ್ದಿ:— ಕಳ್ಳಾ, ಇಲ್ಲಿ ಇಲ್ಲವಲ್ಲಾ; ಮತ್ತೆಲ್ಲಿ ಇಟ್ಟಿರುವೆ? ಎಂದು ಕಣ್ಣು ಕಿಸಿದು ಕೇಳಿದರು. ಇದನ್ನು ನೋಡಿ ಇನಸ್ಪೆಕ್ಟರರು ಕುಳಿತ ಜಾಗೆಯಿಂದ ಎದ್ದು ಬಂದು, ಹವಾಲದಾರರನ್ನು ಕುರಿತು:— ಹರಾಮಖೋರರಿರಾ! ನೀವೆಲ್ಲರೂ ಕೂಡಿ, ಹೀಗೆ ಹೊಡೆದು, ಬಡೆದು, ಹೆದರಿಸಿಯೇ ಇವರನ್ನು ಒಪ್ಪಿಕೊಳ್ಳುವ ಹಾಗೆ ಮಾಡಿದಂತೆ ತೋರುತ್ತದೆ, ಎಂದು ಸಿಟ್ಟು ಮಾಡಿ, ಸೀತಾಬಾಯಿಯನ್ನು ಮುಂದಕ್ಕೆ ಕರೆದು:— ಅಮ್ಮಾ ಸೀತಾಬಾಯಿ, ಮುರಲೀಧರನು ಅಣ್ಣನ ಮನೆಯಲ್ಲಿ ಕಳವು ಮಾಡಿಕೊಂಡು ತಂದ ದಾಗೀನೆ-ರೂಪಾಯಿಗಳನ್ನು ಎಲ್ಲಿ ಇಟ್ಟಿರುವನು? ನಿಮಗೇನಾದರೂ ಗೊತ್ತಿರುವದೋ? ನಿಮ್ಮನ್ನು ಸಹ ಚಾವಡಿಗೆ ಒಯ್ಯಬೇಕಾಗುವದು, ಎಂದು ಸಮಾಧಾನ ವೃತ್ತಿಯಿಂದ ಕೇಳಿದರು. ಅದಕ್ಕೆ ಸೀತಾಬಾಯಿಯು:— ರಾವಸಾಹೇಬ, ಮುರಲೀ

ಧನು ಕಳವು ಮಾಡಿಯೇ ಇಲ್ಲ; ಅಂದಮೇಲೆ ತಮಗೆ ಹೇಳುವದೇನು? ನಮ್ಮೆಲ್ಲರನ್ನು ಚಾವಡಿಗಾದರೂ ಒಯ್ಯಿರಿ. ಇಲ್ಲವೆ ನೆಟ್ಟಗೆ ಸ್ವರ್ಗಕ್ಕಾದರೂ ಕಳಿಸಿರಿ. ಇದರ ಮೇಲೆ ನಿಮ್ಮ ಇಚ್ಛೆಯು! ಎಂದು ವಿನಯದಿಂದ ಉತ್ತರ ಕೊಟ್ಟಳು.

ಮುರಲೀಧರನು ಕಳವು ಮಾಡಿದ್ದೇ ನಿಶ್ಚಯವು, ಎಂಬ ಸಂಶಯ ಪಿಶಾಚಿಯು ಇನಸ್ಪೆಕ್ಟರರಿಗೆ ಬಡಿದುಕೊಂಡದ್ದರಿಂದ, ಈ ಸೀತಮ್ಮನ ಮಾತು ಅವರಿಗೆ ನಿಜದೋರಲಿಲ್ಲ; ಮತ್ತು ಇಡಿ ರಾತ್ರಿಯಲ್ಲಿ ನಿದ್ದೆಗೆಟ್ಟದ್ದರಿಂದ ಅವರಿಗೆ ಬೇಸರಬಂದು ಹೋಗಿತ್ತು. ಈಗ ಅವರು ಕುಳಿಂದಸ್ವಾಮಿಯವರಿಗೆ:—ಸ್ವಾಮಿ, ಮುರಲೀಧರನು ಒಬ್ಬನೇ ಕಳವು ಮಾಡಿದ್ದರೂ ಇವರೆಲ್ಲರಿಗೆ ಅದು ಗೊತ್ತಿರಲೇ ಬೇಕು. ಇವರೊಂದಿಗೆ ಈ ಮಕರಂದನನ್ನೂ ಚಾವಡಿಗೆ ಕರೆದುಕೊಂಡು ನಡೆಯಿರಿ. ಇವನಿಂದಲೇ ಎಲ್ಲ ನಿಜ ಸಂಗತಿಯನ್ನು ಬೈಲಿಗೆಳೆಯೋಣ, ಎಂದು ಹೇಳಿ, ತಾವು ಮನೆಗೆ ಹೋಗಿಬಿಟ್ಟರು.

ಇನಸ್ಪೆಕ್ಟರ ಸಾಹೇಬರು ಸ್ವಲ್ಪ ದೂರ ಹೋದಬಳಿಕ, ಮುರಲೀಧರ ಕಮಲಾಬಾಯಿಯರ ಮೇಲೆ ಕೋಪಾಗ್ನಿಯನ್ನು ಕಾರುತಲಿದ್ದ ಕುಳಿಂದ ಸ್ವಾಮಿಯವರು ಈಗ ಮುರಲೀಧರನಿಗೆ:—ಭಂಡಾ, ಸುಳ್ಳುಹೇಳಿ ನಮ್ಮನ್ನಿಲ್ಲಿಯ ವರೆಗೆ ಕರೆದುಕೊಂಡು ಬಂದು ಇನಸ್ಪೆಕ್ಟರರ ಕಡೆಯಿಂದ ಬೈಸಿದೆಯಾ? ಎಂದು ಗರ್ಜಿಸಿ ಕೇಳಿದರು. ಮುರಲೀಧರನು ಗದಗದ ನಡುಗುತ್ತ ಸಮೀಪದಲ್ಲಿ ನಿಂತುಕೊಂಡಿದ್ದ ತಾಯಿಯ ಬಳಿಗೆ ಹೋಗಿ:—ಮತ್ತೆ ಹೊಡೆಯಬೇಡಿರಿ, ನಿಮ್ಮ ಕಾಲಿಗೆ ಬೀಳುತ್ತೇನೆ. ಹೊಡತವನ್ನು ತಾಳಲಾರದೆ ಸುಳ್ಳುಹೇಳಿದೆನು. ನಾನು ದಾಗೀನೆ-ರೂಪಾಯಿಗಳನ್ನು ನೋಡಿಲ್ಲ. ಅವ್ವಾ ಅವ್ವಾ!! ಮತ್ತೆ ಹೊಡೆಯುತ್ತಾರೆ ಬಿಡಿಸು, ಎಂದು ಆರ್ತಸ್ವರದಿಂದ ಹೇಳಿಕೊಂಡು, ಹಸುಗೂಸಿನಂತೆ ಸೀತಾಬಾಯಿಗೆ ತೆಕ್ಕೆಬಿದ್ದನು.

ಸೀತಾಬಾಯಿಯು ನಡುಗುವ ಮಗನನ್ನು ಎಡಗೈಯಿಂದ ಎದೆಗೆ ಅವಚಿ ಹಿಡಿದುಕೊಂಡು:—ಹವಾಲದಾರ ಸ್ವಾಮಿಯವರೇ, ವ್ಯರ್ಥವಾಗಿ ಮಗನನ್ನು ಯಾಕೆ ನುಗ್ಗು ಮಾಡುವಿರಿ? ಅವನು ಕಳವು ಮಾಡಿಲ್ಲ. ನನ್ನ ಮುದ್ದು ಮಗನನ್ನು ಹೊಡೆಯುವ ಮೊದಲು..........ಎಂದು ಇನ್ನೂ ಏನೇನೋ ಹೇಳಿಕೊಳ್ಳುವಷ್ಟರಲ್ಲಿಕುಳಿಂದ ಸ್ವಾಮಿಯವರು ಮುರಲೀ

ಧರನ ರಟ್ಟೆಯನ್ನು ಹಿಡಿದೆಳೆದು, ನೆಲಕ್ಕೆ ಕೆಡವಿ, ಎದೆಯಮೇಲೆ ಕುಳಿತರು. ತೊಡೆಗಳಿಂದ ತಿಕ್ಕುತ್ತಲೂ, ಬಾಯಿಗೆ ಹೊಡೆಯುತ್ತಲೂ:—ಹೊಲೆಯಾ ತಾಯಿಗೆ ತೆಕ್ಕೆ ಬಿದ್ದರೆ, ಅವಳೇನು ಮಾಡುವಳು? ದಾಗೀನೆ-ರೂಪಾಯಿಗಳನ್ನು ಕೊಡುತ್ತೇನೆಂದು ಟಾಂಗೆಯಮೇಲೆ ಕುಳಿತುಕೊಂಡು ಬಂದಿರಲ್ಲಾ! ಹೇಳು ಈಗ ಅವುಗಳನ್ನು ಎಲ್ಲಿ ಇಟ್ಟಿರುವೆ? ಎಂದು ಕೇಳಹತ್ತಿದರು. ಹರಿಸಿಂಗ ಸಿಪಾಯಿಯು ಆ ಆಸುರೀ ಕೃತ್ಯವನ್ನು ನೋಡಿ ದಂಗುಬಡೆದು ನಿಂತನು. ಮುರಲೀಧರನಂತೂ:— ಅವ್ವಾ ನಾನು ಸಾಯುತ್ತೇನೆ; ಅಪ್ಪಾ ನನ್ನನ್ನು ಕೊಲ್ಲುತ್ತಾರೆ. ದೇವರೇ ಈ ಯಮಯಾತನೆಯೊಳಗಿಂದ ಒಮ್ಮೆ ಮುಕ್ತಮಾಡಿ, ಒಯ್ದು ಬಿಡು! ಎಂದು ಹಂಬಲಿಸುತ್ತಿದ್ದನು. ಈ ರಾಕ್ಷಸೀ ಕೃತಿಯನ್ನು ನೋಡಲಾರದೆ ಸೀತಮ್ಮ-ಕಮಲಾಬಾಯಿಯರು ದುಃಖವಿಹ್ವಲರಾಗಿ ನಡುಮನೆಯಲ್ಲಿ ಬಂದು ಒಬ್ಬರಿಗೊಬ್ಬರು ತೆಕ್ಕೆಬಿದ್ದು ದೊಡ್ಡ ದನಿಯಿಂದ ಅಳಹತ್ತಿದರು. ಮಕರಂದನು ಸಮೀಪದಲ್ಲಿ ನಿಂತುಕೊಂಡು ಕಣ್ಣೀರು ಸುರಿಸುತ್ತ:—ಅವ್ವಾ! ಮುರಲೀ ಅಣ್ಣನನ್ನು ಕೊಲ್ಲುತ್ತಾರೆ. ಬಿಡಿಸಬಾರದೇ? ಅವ್ವಾ, ಅಣ್ಣನು ನಿನ್ನನ್ನು ಒದರುತ್ತಾನೆ. ಅಕೋ ನೋಡು, ಕಮಲಕ್ಕಾ, ನೀನಾದರೂ ಬಾ. ವಿನಾಯಕಣ್ಣನಿಗೆ ಹೇಳಿ........ಎಂದು ಇನ್ನೂ ಮುಂದೆ ಹೇಳುತ್ತಿರುವಷ್ಟರಲ್ಲಿ ವಿನಾಯಕರಾಯರು ಗರ್ಜಿಸುತ್ತ ಅಲ್ಲಿಗೆ ಬಂದರು. ಕೂಡಲೆ ಕಮಲಾಬಾಯಿಯು ಅತ್ತೆಯಿಂದ ದೂರ ಸರಿದು ನಿಂತುಕೊಂಡಳು. ಈಗ ವಿನಾಯಕರಾಯರು ಮೀಸೆಯನ್ನು ಹುರಿಮಾಡಿಕೊಳ್ಳುತ್ತ ತಾಯಿಯನ್ನುದ್ದೇಶಿಸಿ:—ಮುದಿಗೂಗೀ, ಮೂಲೆಯಲ್ಲಿ ಯಾಕೆ ನಿಂತುಕೊಂಡಿ? ಬಾ ಅಲ್ಲಿ ನಿಮ್ಮ ಚಿಕ್ಕಪ್ಪನು ಕರೆಯುತ್ತಾನೆ. ಹೀಗೆ ಅಳುತ್ತ ನಿಂತುಕೊಂಡರೆ ನಿನ್ನನ್ನು ಬಿಡುವರೆಂದು ತಿಳಿದಿರುವಿಯೇನು? ಕಳವು ಮಾಡಿಸುವಾಗ್ಗೆ ಬುದ್ಧಿ ಇದ್ದಿಲ್ಲವೆ? ಕೊಡು ನನ್ನ ದಾಗೀನೆ-ರೂಪಾಯಿಗಳನ್ನು. "ಕಬ್ಬಿಣದ ಸಲಖಡೆಗಳು ನಿನಗೇ ಒಪ್ಪುವವು" ಎಂದು ಬೊಗಳಿದ ಹೊಲೆಯನು ಈಗ ಹ್ಯಾಗೆ ಲಬ್ಬಿ ಕುಟ್ಟುತ್ತಾನೆ ನೋಡು. ನನ್ನ ಕೈಯಿಂದ ನೀವು ಪಾರಾಗಿ ಹೋಗುವಿರಾ? ಒಬ್ಬೊಬ್ಬರನ್ನೇ ಜೇಲಿಗೆ ಕಳಿಸುತ್ತೇನೆ, ತಿಳಿದಿರು. ಹೂಂ, ಯಾಕೆ ಸುಮ್ಮನೆ ನಿಂತುಕೊಂಡಿ? ಬಾ ಅಲ್ಲಿ ಹಿತ್ತಲಕ್ಕೆ, ನಿನಗೂ ನಾಲ್ಕು ತಳಿಸುತ್ತಾರೆ. ಹೂಂ, ಲಗು ನಡೆ; ಎಂದು ಬೊಗಳುತ್ತಿದ್ದರು. ಸಂತಾಪಗೊಂಡು ನಿಂತಿದ್ದ

ಸೀತಮ್ಮನು ತಿರಸ್ಕಾರ ದೃಷ್ಟಿಯಿಂದ ವಿನಾಯಕರಾಯರ ಮುಖ ನೋಡುತ್ತ:—

ಕುಲಕಂಟಕಾ! ಬಾಯಿ ಮುಚ್ಚು. ಆಡಬಾರದ ಮಾತುಗಳನ್ನಾಡಿ ಯಾಕೆ ಬಾಯಿ ಹೊಲಸು ಮಾಡಿಕೊಳ್ಳುತ್ತೀ? ನಿನಗೆ ಸ್ವಲ್ಪಾದರೂ ನಾಚಿಕೆ ಇಲ್ಲವೇ? ಬೆನ್ನಿಲೆ ಬಿದ್ದ ತಮ್ಮನು ಪ್ರಾಣಸಂಕಟದಿಂದ ಒದ್ದಾಡುವದನ್ನು ನೋಡಿ ನಲಿದಾಡುವ ಚಾಂಡಾಲಾ!! ನಿನಗೆ ಯಾರು ಜನ್ಮ ಕೊಟ್ಟರು? ಯಾರ ಹೆಸರನ್ನು ಹೇಳುತ್ತೀ? ದೇಹವನ್ನು ಸವಿಸಿ ಗಳಿಸಿದ ಯಾರ ಸ್ವತ್ತನ್ನು ಅಪಹರಿಸಿ ಸುಖದಿಂದ ಭೋಗಿಸುತ್ತೀ? ಎಂಬದರ ವಿಚಾರವನ್ನು ಸ್ವಲ್ಪಾದರೂ ಮಾಡಿರುವೆಯಾ? ನಿರಪರಾಧಿಯಾದ ತಮ್ಮನು ಜೇಲಿಗೆ ಹೋದರೆ ನೀನು ಹೋದಂತಾಗಲಿಲ್ಲವೇ? ಗೋಮುಖವ್ಯಾಘ್ರನೇ!!! ಕಟುಕರ ಕುಲದಲ್ಲಿ ಕೂಡಾ ಹುಟ್ಟಲಿಕ್ಕೆ ನೀನು ಅಯೋಗ್ಯನು! ನೀನಿಂಥ ಪಾಪಿಯಾಗುವಿಯೆಂದು ನನಗೆ ಮೊದಲೇ ತಿಳಿದಿದ್ದರೆ, ಹುಟ್ಟದ ಕೂಡಲೆ ಸೀಳಿ ಒಗೆಯುತ್ತಿದ್ದೆನು; ಆದರೆ ಉಪಾಯವಿಲ್ಲ. ನಿನ್ನಂಥ ಕಟುಕನಿಗೆ ಜನ್ಮಕೊಟ್ಟು ನಾನೇ ಮಹತ್ಪಾಪ ಮಾಡಿದಂತಾಗಿರುವದು. ನಿನಗಾದರೂ ಯಾಕೆ ದೋಷ ಕೊಡಬೇಕು? ಹಾಯ್ ಹಾಯ್! ನನ್ನ ಮುದ್ದು ಕುಮಾರನ ಗೋಳಾಟವನ್ನು ಕಿವಿಯಿಂದ ಕೇಳಲಾರೆನು. ವಿನಾಯಕಾ! ಅಲ್ಲ-ಅಲ್ಲ. ವಿನಾಯಕರಾಯಾ! ನಿನಗೆ ಇಲ್ಲಿಯವರೆಗೆ ನಿಂದಿಸಿದ್ದು ತಪ್ಪಾಯಿತು. ಇಗೋ ನಿನಗೆ ನಮಸ್ಕಾರ ಮಾಡುತ್ತೇನೆ. ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ!!! ಇನ್ನಾದರೂ ನಿನ್ನ ಛಲವನ್ನು ಬಿಡು! ಅಂತಃಕರಣ ತಾಳು!! ತಮ್ಮನ ಜೀವ ಉಳಿಸು!!! ಸಾಧ್ವಿಯಾದ ಕಮಲಾಬಾಯಿಯ ಪ್ರಖರವಾದ ಸತ್ವಕ್ಕೆ ಎದುರಾಗಿ ನಿಲ್ಲಬೇಡ. ಅದರಿಂದ ನಿನಗೆ ಕಲ್ಯಾಣವಾಗದು. ಪತಿವ್ರತೆಯರ ಸಿಟ್ಟನಲ್ಲಿ ಮೂರು ಲೋಕಗಳನ್ನು ದಹಿಸುವಷ್ಟು ಸಾಮರ್ಥ್ಯವಿರುತ್ತದೆಂದು ತಿಳಿ. ಮಗನೇ! ಅಣ್ಣನ ಹೆಂಡತಿಯೆಂದರೆ ತಾಯಿಗೆ ಸಮಾನಳಲ್ಲವೇ? ಎಂದು ಕರುಣಾಜನಕ ಸ್ವರದಿಂದ ಹೇಳಿಕೊಂಡು, ಮೇಲಕ್ಕೆ ಮುಖವೆತ್ತಿ, ಆಶಾಜನಕ ದೃಷ್ಟಿಯಿಂದ ಮಗನ ಮುಖ ನೋಡುತ್ತ ಅವನ ಕಾಲನ್ನು ಹಿಡಿದುಕೊಂಡಳು!

ಇದರಿಂದಲೂ ವಿನಾಯಕರಾಯರಿಗೆ ಧಯೆಬರಲಿಲ್ಲ ಅವರು

ಹಿಂದಕ್ಕೆ ಸರಿದು ನಿಂತು:—ನನ್ನ ಕಾಲನ್ನೇಕೆ ಹಿಡಿದುಕೊಳ್ಳುವಿ? ಸರಿ ಹಿಂದಕ್ಕೆ. ನಾನು ಚಾಂಡಾಲನು! ಕುಲಕಂಟಕನು!! ಗೋಮುಖ ವ್ಯಾಘ್ರನು, ಎಂಬದು ಗೊತ್ತಿಲ್ಲವೇ? ವ್ಯಮೇಲೆ ಬಂದಾಗ್ಗೆ ಈಗ ವಿನಾಯಕರಾಯನು ಬೇಕಾದನು. ಈ ದರಿದ್ರ ಮುಂಡೆಯು ತಾಯಿಯಂತೆ. ಈ ಹೊಲೆಯರು ತಮ್ಮಂದಿರಂತೆ. ನನ್ನಂಥ ಲೋಕ ವಿಖ್ಯಾತನು ಈ ಸರ್ವಾರಿಷ್ಟಳಿಗೆ ಅವ್ವಾ, ಎಂದು ಕರೆಯಬೇಕೇ? ನನ್ನಂಥ ಶ್ರೀಮಂತ ಪುತ್ರ ರತ್ನವನ್ನು ಪಡೆಯಬೇಕಾದರೆ, ಹಿಂದಿನ ಜನ್ಮದಲ್ಲಿ ನೀನು ಎಷ್ಟು ಪುಣ್ಯ ಗಳಿಸಿದ್ದಿಯೋ ತಿಳಿಯದು. ಇಂದಿನಿಂದ ನನಗೆ ಮಗನೇ, ಎಂದು ಸಂಬೋಧಿಸಿದೆಯಾದರೆ ನಿನ್ನ ಪರಿಣಾಮವಾಗದು. ಈ ಧುರಂಧರನಿಗೆ ನಿಮ್ಮಂಥ ಅಳುಬುರುಕ ತಾಯಿ-ತಮ್ಮಂದಿರು ಬೇಡ. ಹೀಗೆಯೇ ಒರಲುತ್ತ ನೀವೆಲ್ಲರೂ ಪರಲೋಕದ ಹಾದಿಯನ್ನು ಹಿಡಿಯುವದೇ ಯೋಗ್ಯವು, ಎಂದು ಅಹಂಭಾವದಿಂದ ನುಡಿದು, ನಮಸ್ಕಾರ ಮಾಡಲು ಬಾಗಿದ್ದ ತಾಯಿಗೆ ಒದೆದು, ಹಿತ್ತಲಕಡೆಗೆ ಹೋದರು.

ಅಷ್ಟರಲ್ಲಿ ಬೆಳಗಾಯಿತು. ನೆರೆಹೊರೆಯ ಜನರು ಈ ಗೋಳಾಟವನ್ನು ಕೇಳಿ, ಹಿತ್ತಲ ಗೋಡೆಯನ್ನು ಹತ್ತಿ, ಹಣಿಕಿ ನೋಡಿದರು. ಕುಳಿಂದಸ್ವಾಮಿಯವರು ಮುರಲೀಧರನಿಗೆ ಹೊಡೆಯುವದನ್ನು ಬಿಟ್ಟು, ಮಕರಂದನನ್ನೂ ಸಹ ಕರೆದುಕೊಂಡು ಚಾವಡಿಗೆ ನಡೆದರು.



## ಐದನೆಯ ಪರಿಚ್ಛೇದ.



ಮಧ್ಯಾಹ್ನದ ೧೦ ಗಂಟೆಗೆ ಮುರಲೀಧರನನ್ನು ನಡುವೆ ಮಾಡಿ, ಎಡಬಲಕ್ಕೆ ಕಮಲಾಬಾಯಿ.-ಮುಕರಂದರು ಬರುವಂತೆ ಎರಡು ಬೇಡಿಗೆಳನ್ನು ತೊಡಿಸಿ ಈ ಚಂದದಿಂದ ಅವರನ್ನು ಎಲ್ಲಿಗೋ ಕರಕೊಂಡು ನಡೆದರು. ಸೌಂದರ್ಯಶಾಲಿನಿಯಾದ ಕಮಲಾಬಾಯಿಯ ಮನೋಹರವಾದ ಮುಖವು ಈಗ ಅಪಾರವಾದ ದುಃಖದಿಂದ ಕಂದಿಹೋಗಿತ್ತು. ಎರಡು ದಿನ ಪೂರ್ಣ ನಿದ್ರಾಹಾರಗಳಿಲ್ಲದ್ದರಿಂದ ಆ ಸುರಸುಂದರಿಯು ಯೌವನದಿಂದ ತುಂಬಕೊಂಡು ಒಪ್ಪುವ ಅವಯವಗಳ ಕಾಂತಿಯಂತೂ ಅಳಿದು ಹೋಗಿತ್ತು. ಸ್ವಚ್ಛತಾ ಪ್ರಿಯಳಾದ ಆ ಸುಶೀಲೆಯ ಉಟ್ಟ ಸೀರೆಯು ಮಾಸಿ ಮುದ್ದಿಯಾಗಿಹೋಗಿತ್ತು. ಕಮಲಾಬಾಯಿಯ ಅವಸ್ಥೆಯೇ ಹೀಗಾಗಿದ್ದ ಮೇಲೆ ಮುರಲೀಧರನ ಅವಸ್ಥೆಯು ಹ್ಯಾಗಾಗಿರಬಹುದೆಂಬದನ್ನು ವಾಚಕರೇ ತರ್ಕಿಸತಕ್ಕದ್ದು. ಇರಲಿ.

ಪೋಲೀಸರೆಲ್ಲರೂ ಕೂಡಿ, ಮುರಲೀಧರನ ಮನೆಯ ಹಿತ್ತಲಲ್ಲಿರುವ ಹಾಳು ಬಾವಿಗೆ ಬಂದರು. ಮೊದಲು ಸೀ ನೀರಿಗಾಗಿ ಪ್ರಸಿದ್ಧಿಗೊಂಡ ಆ ಬಾವಿಯು ನಳಗಳ ಅಬ್ಬರದಲ್ಲಿ ಈಗ ನೆರೆಹೊರೆ ಮನೆಯವರ ಬೂದಿ ಕಸಗಳಿಂದ ಅರ್ಧ ಹುಗಿದು ಸದ್ಯಕ್ಕೆ ತಿಪ್ಪಿಯಗುಂಡಿಯಾಗಿತ್ತು. ಪೋಲೀಸ ಇನಸ್ಪೆಕ್ಟರರ ಅಪ್ಪಣೆಯ ಪ್ರಕಾರ ಒಬ್ಬ ಗಟ್ಟಿಗನಾದ ಪೋಲೀಸನನ್ನು ಹಗ್ಗದ ಸಹಾಯದಿಂದ ಆ ಹಾಳು ಬಾವಿಯೊಳಗೆ ಇಳಿಸಿದರು. ಅವನು ತಳವನ್ನು ಮುಟ್ಟುತ್ತಲೇ:—ಸಿಕ್ಕಿತು, ಸಿಕ್ಕಿತು; ಬಿಳಿ ಅರಿವೆಯ ಗಂಟು ಸಿಕ್ಕಿತು. ಇದರಲ್ಲಿ ಎಲ್ಲ ಹಣವಿದ್ದಂತೆ ತೋರುತ್ತದೆ; ಎಂದು ಕೂಗಿ ಹೇಳಿದನು. ಮೇಲಿನವರು ಆ ಗಂಟನ್ನೂ ಆವನನ್ನೂ ಅದೇ ಹಗ್ಗದ ಸಹಾಯದಿಂದ ಮೇಲೆ ಎಳೆದುಕೊಂಡರು. ಆ ಮೇಲೆ ಅದೇ ಓಣಿಯೊಳಗಿನ ನಾಲ್ಕು ಮಂದಿ ಪಂಚರನ್ನು ಕೂಡಿಸಿ, ಅವರ ಸಮಕ್ಷಮ ಆ ಗಂಟನ್ನು ಬಿಚ್ಚಿದರು. ಇದರಲ್ಲಿ ರೋಖು ಒಂಬತ್ತು ನೂರಾ ತೊಂಬತ್ತೈದು ರೂಪಾ

ಯಿಗಳೂ, ಬಂಗಾರದ ಗುಂಡು ನಾಗಮುರಿಗೆಗಳಜೋಡೂ ಇದ್ದವು; ವಿನಾಯಕರಾಯರು "ಇವು ನನ್ನ ದಾಗೀನೆಗಳು" ಎಂದು ಒಪ್ಪಿಕೊಂಡಮೇಲೆ ಪಂಚನಾಮೆಯನ್ನು ಬರೆಯುವದಕ್ಕೆ ಪ್ರಾರಂಭವಾಯಿತು.

ಕಮಲಾಬಾಯಿ-ಮಕರಂದರು(ಪೋಲೀಸರ ಬಲುಮೆಗೆ ಅಂಜಿ):- ಈ ರೂಪಾಯಿ ದಾಗೀನೆಗಳನ್ನು ಮುರಲೀಧರನು ನಮ್ಮಿಬ್ಬರ ಕೈಯಲ್ಲಿ ತಂದುಕೊಟ್ಟನು. ಕೂಡಲೆ ನಾವು ಇವುಗಳನ್ನು ಅರಿವೆಯಲ್ಲಿ ಕಟ್ಟಿ, ಈ ಭಾವಿಯೊಳಗೆ ಒಗೆದೆವು, ಎಂದು ಹೇಳಿದರು. ಇದರಂತೆಯೇ ಪಂಚನಾಮೆಯು ಬರೆದು ಸಿದ್ಧವಾಯಿತು. ಪಂಚರ ಸಹಿಗಳೂ ಆದವು. ಆ ಮೇಲೆ ಮೂವರನ್ನೂ ಕರೆದುಕೊಂಡು ಪೋಲೀಸರು ಚಾವಡಿಗೆ ಹೋಗಿ ಬಿಟ್ಟರು.

ದಾಗೀನೆಗಳು ಸಿಕ್ಕ ಸುದ್ದಿಯು ಕೇಳ ಕೇಳುವಷ್ಟರಲ್ಲಿ ಇಡೀ ಧಾರವಾಡದ ತುಂಬೆಲ್ಲ ಹಬ್ಬಿಹೋಯಿತು. ನಿಜ ಸಂಗತಿಯನ್ನರಿಯದ ಜನರು ಮುರಲೀಧರ-ಕಮಲಾಬಾಯಿಯರನ್ನು ಅನೇಕ ಬಗೆಯಾಗಿ ನಿಂದಿಸಹತ್ತಿದರು. ಗ್ರಾಮಕೀಟಕರಾದ ನಿರುದ್ಯೋಗೀ ಜನರಿಗಂತೂ ಎಂಟುದಿವಸದ ಅನ್ನವಾಯಿತು; ಆದರೆ ಮಹಾದೇವಪ್ಪನವರಿಗೆ ಮಾತ್ರ ಹೇಳಕೂಡದಷ್ಟು ದುಃಖವಾಗಿತ್ತು. ಅವರು ಹೊಟ್ಟೆಯ ಪರಿವೆ ಇಲ್ಲದೆ ಒಮ್ಮೆ ಇನಸ್ಪೆಕ್ಟರರ ಮನೆಗೂ, ಮತ್ತೊಮ್ಮೆ ವಿನಾಯಕರಾಯರ ಮನೆಗೂ ಒಂದೇಸವನೆ ಎಡತಾಕಿದ್ದಲ್ಲದೆ, ಕುಳಿಂದ ಸ್ವಾಮಿಯವರಿಗೂ ಕೈಕಾಲು ಬಿದ್ದು ಹೇಳಿಕೊಂಡರು; ಆದರೆ ಅವರಿಗೇನೂ ದಯಬರಲಿಲ್ಲ. ನ್ಯಾಯನಿಷ್ಠುರರಾದ ಇನಸ್ಪೆಕ್ಟರರಿಗಂತೂ ಬಲಿಷ್ಠವಾದ ಸಂಶಯ ಪಿಶಾಚಿಯು ಬಡಕೊಂಡದ್ದರಿಂದ ಅವರು ಕೋಪಗೊಂಡು ಹೋಗಿದ್ದರು ಮುರಲೀಧರನು ನಿರ್ದೋಷಿಯೆಂದು ಮಹಾದೇವಪ್ಪನವರು ಎಷ್ಟು ಬಗೆಯಾಗಿ ಹೇಳಿಕೊಂಡರೂ ಇನಸ್ಪೆಕ್ಟರರಿಗೆ ನಿಜದೋರಲಿಲ್ಲ; ಆದರೂ, ಅವರು ಸ್ವಲ್ಪ ಅಂತಃಕರಣತಾಳಿ, ಮುರಲೀಧರನೊಬ್ಬನನ್ನೇ ಅಪರಾಧಿಯನ್ನಾಗಿ ಮಾಡಿ, ಕಮಲಾಬಾಯಿ-ಮಕರಂದರನ್ನು ಸಾಕ್ಷಿದಾರರನ್ನಾಗಿ ಮಾಡುತ್ತೇನೆ, ಎಂದು ಹೇಳಿ, ಮಹಾದೇವಪ್ಪನವರನ್ನು ಸಂತೈಸಿ ಕಳಿಸಿದರು. ಎಂದೂ ಯಾರ ಮಾತನ್ನೂ ಕೇಳದ ಇನಸ್ಪೆಕ್ಟರ ಸಾಹೇಬರು ಇಷ್ಟು ದಯೆ ತಾಳಿದ್ದೇ ತಮ್ಮ ಮಹದ್ಭಾಗ್ಯವೆಂದು ನೆನಿಸುತ್ತ ಮಹಾದೇವಪ್ಪನವರು ಮನೆಗೆ ಹೋದರು.

ಮಧ್ಯಾಹ್ನದ ಮೂರು ಘಂಟೆಯ ಸುಮಾರಕ್ಕೆ ಮೂವರನ್ನೂ ಕಳವಿನ ಮಾಲು ಸಹಿತವಾಗಿ ಬೆಂಚಕೋರ್ಟಿಗೆ ಒಯ್ದರು. ೩೭೦ನೇ ಕಲಮಿನ ಪ್ರಕಾರ ಅಪರಾಧಿಯಾದ ಮುರಲೀಧರನನ್ನು ಸೆರೆಮನೆಯಲ್ಲಿ ಹಾಕಿದರು; ಮತ್ತು ೧೭೪ನೇ ಕಲಮಿನ ಪ್ರಕಾರ ಕಬೂಲಿ ಜಬಾಬು ಗಳನ್ನು ಕಮಲಾಬಾಯಿ-ಮಕರಂದರ ಕಡೆಯಿಂದ ಕೊಡಿಸಿ, ಅವರಿಗೆ ಮನೆಗೆ ಹೋಗಲು ಅಪ್ಪಣೆಕೊಟ್ಟರು.

ಖಟ್ಲೆಯು ಮುಂದೆ ಸಾಗಿತು. ವಿನಾಯಕ ರಾಯರು ಅದೇ ಊರಿನ "ಮೋಹಿತೆ" ಎಂಬ ವಕೀಲನನ್ನು ಇಟ್ಟರು. ಮಹಾದೇವಪ್ಪ ನವರು ಸ್ವತಃ ದುಡ್ಡು ಖರ್ಚುಮಾಡಿ ಮುರಲೀಧರನ ಪಕ್ಷದಿಂದ "ಕಿಲ್ಲೇ ದಾರ" ಎಂಬ ವಕೀಲರನ್ನು ಇಟ್ಟರು. ವರ್ತಮಾನ ಪತ್ರಕಾರರು ನಾ ಮುಂದೆ, ನಾಮುಂದೆ ಎಂದು ಈ ಖಟ್ಲೆಯ ವಿಷಯಕ್ಕೆ ಮನೋರಂಜಕ ವಾದ ಲೇಖಗಳನ್ನು ಕೊಡಹತ್ತಿದರು. ಕೆಲವು ಪತ್ರಗಳು ಫಿರ್ಯಾದಿಯ ಪಕ್ಷವನ್ನೂ ಕೆಲವು ಪತ್ರಗಳು ಅಪರಾಧಿಯ ಪಕ್ಷವನ್ನೂ ವಹಿಸಿ, ತಮ್ಮ ತಮ್ಮೊಳಗೆ ಘನಘೋರವಾದ ಸಂಗ್ರಾಮನ್ನೇ ನಡಿಸಿದವು. ಧಾರವಾಡದ ಪತ್ರಗಳೆಂದರೆ, ಪತಿ-ಪತ್ನಿಯರ ಸೋಡ ಚೀಟಿಗಳ ನೋಟೀಸುಗಳಿಂದಲೇ ತುಂಬಿರುತ್ತವೆಂದು ಹೀಯಾಳಿಸುತ್ತಿದ್ದ ಪುಣೆ ಮುಂಬಯಿ ಮದ್ರಾಸದ ನಿವಾಸಿಗಳು ಈಗ ಅವನ್ನು ಪ್ರೀತಿಯಿಂದ ಓದಹತ್ತಿದರು.

ಪಾರತಂತ್ರ್ಯವೆಂಬದು ತ್ರಾಸದಾಯಕವಲ್ಲವೇ? ಮುರಲೀಧರನಿಗೆ ಸೆರೆಮನೆಯಲ್ಲಿರುವದು ಬಹಳ ಕಷ್ಟವೆನಿಸಿತು. ದಿನಾಲು ಸ್ನಾನ ಮಾಡದೆ ಊಟ ಮಾಡದ ಮುರಲೀಧರನಿಗೆ ಪ್ರಾತಃಕಾಲಕ್ಕೆ ಮುಖ ತೊಳೆದು ಕೊಳ್ಳಲಿಕ್ಕೆ ಹೆಚ್ಚಾಗಿ ನೀರು ಸಹ ಸಿಗುತ್ತಿದ್ದಿಲ್ಲ. ಅವನಿರುವ ಖೋಲಿಯಲ್ಲಿ ಬಗೆಬಗೆಯ ಕೀಳು ಜಾತಿಯ ಹತ್ತು ಜನರಿದ್ದರು. ಸ್ನಾನವಿಲ್ಲದೆ ಅವನ ಮೈಯೂ ಅರಿವೆ-ಅಂಚಡಿಗಳೂ ಮಾಸಿ, ಜಿಡ್ಡು ನಾರುತ್ತಿದ್ದವು. ಎಲ್ಲರ ನಡುವೆ ಹಾಸಿಕೊಳ್ಳಲಿಕ್ಕೂ ಹೊದ್ದುಕೊಳ್ಳಲಿಕ್ಕೂ ಕೂಡಿ, ನಾಲ್ಕೇ ಕಂಬಳಿ ಗಳಿದ್ದವು; ಅವೂ ನೀರಿನ ದರುಶನವಿರದೆ ತಗಣಿ ಚಿಕ್ಕಾಡು ಕೂರಿಗಳಿಂದ ತುಂಬಿಹೋಗಿದ್ದವು. ಅಲ್ಲಿಯೇ ಒಂದು ಮೂಲೆಯೊಳಗಿನ ಬಚ್ಚಲದಲ್ಲಿ ಎಲ್ಲರೂ ಮೂತ್ರ ವಿಸರ್ಜನೆ ಮಾಡುತ್ತಿದ್ದರು. ಸ್ವಚ್ಛತಾಪ್ರಿಯನಾದ ನಮ್ಮ ಮುರಲೀಧರನು ಇವೆಲ್ಲವುಗಳನ್ನು ನೋಡಿ, ಹೇಸಿಕೊಂಡು ಮೊದಲು

ಎರಡು ದಿವಸಗಳ ವರೆಗೆ ಅನ್ನ ನೀರುಗಳನ್ನು ಸಹ ಮುಟ್ಟಲಿಲ್ಲ. ಕೂರಿ ಗುಂಗಾಡುಗಳ ಕಾಟದಲ್ಲಿ ನಿದ್ರೆಯಂತೂ ಬರುತ್ತಲೇ ಇದ್ದಿಲ್ಲ! ಹೀಗಾಗಿ ಅವನ ಪ್ರಕೃತಿಯು ಕಟ್ಟು ಜ್ವರ ಬರುತ್ತಿದ್ದವು. ಬರಬರುತ್ತ ಬೇನೆಯು ಹೆಚ್ಚಾಗಿ ಎದ್ದು ನಿಲ್ಲಲಿಕ್ಕೂ ಕೂಡಾ ಶಕ್ತಿ ಇಲ್ಲದಂತಾಯಿತು. ಹೀಗಿದ್ದರೂ ಪ್ರತಿಯೊಂದು ಮುದ್ದತಿಗೆ ತಾಸು ಎರಡು ತಾಸುಗಳವರೆಗೆ ಮ್ಯಾಜಿಸ್ಟ್ರೇಟರ ಮುಂದೆ ಕೋರ್ಟಿನ ಕಟಾಂಜನದಲ್ಲಿ ಕೈಮುಗಿದುಕೊಂಡು ನಿಲ್ಲಬೇಕಾಗುತ್ತಿತ್ತು; ಆದರೂ ಅಂಜಿಕೊಂಡ ಮುರಲೀಧರನು ಅಂಥ ಕ್ಷೀಣಾವಸ್ಥೆಯಲ್ಲಿಯೂಸಹ ಅದನ್ನು ಸಹಿಸುತ್ತಿದ್ದನು. ಹೀಗೆಯೇ ಎರಡು ಮುದ್ದತುಗಳು ಕ್ರಮಿಸಿದವು ಅಷ್ಟರಲ್ಲಿ ರಂಗರಾಯರು ಮಹಾದೇವಪ್ಪನವರ ಪತ್ರದ ಪ್ರಕಾರ ಧಾರವಾಡಕ್ಕೆ ಬಂದರು. ಇದು ವರೆಗೂ ಮಹಾದೇವಪ್ಪನವರು ಎಷ್ಟು ಬಗೆಯಾಗಿ ಹೇಳಿದರೂ ಮುರಲೀಧರನು ಔಷಧವನ್ನೇ ತಕ್ಕೊಂಡಿದ್ದಿಲ್ಲ. ಈ ದಿವಸ ಮಹಾದೇವಪ್ಪನವರೂ ರಂಗರಾಯರೂ ಕೂಡಿ, ವಕೀಲರನ್ನು ಕರೆದುಕೊಂಡು ಮುರಲೀಧರನಿದ್ದಲ್ಲಿಗೆ ಬಂದರು.

ಮುರಲೀಧರನು ಕೂರಿಗಳಿಗೆ ಹೆದರಿ, ಒಂದು ಮೂಲೆಯಲ್ಲಿ ನೆಲದ ಮೇಲೆ ಸುಮ್ಮನೆ ಕುಳಿತುಕೊಂಡಿದ್ದನು. ಉಳಿದವರು ಯಾವ ಚಿಂತೆಯಿಲ್ಲದೆ ಚಕ್ಕಂದದಿಂದ ಹರಟೆಕೊಚ್ಚುತ್ತಲಿದ್ದರು ವಕೀಲರು ಮ್ಯಾಜಿಸ್ಟ್ರೇಟರಿಂದ ಮಾತಾಡಲಿಕ್ಕೆ ಅಪ್ಪಣೆಯನ್ನು ತೆಗೆದುಕೊಂಡು, ಬೇರೆ ಒಂದು ಖೋಲಿಯಲ್ಲಿ ಮುರಲೀಧರನನ್ನು ಕರೆಸಿಕೊಂಡರು. ಮುರಲೀಧರನು ಮೇಲಿಂದ ಮೇಲೆ ಉಸಿರ್ಗರೆಯುತ್ತ ಅಧೋಮುಖನಾಗಿ ಸುಮ್ಮನೆ ಬಂದು ನಿಂತುಕೊಂಡನು. ಇದನ್ನು ನೋಡಿ ರಂಗರಾಯರಿಗೆ ತಡೆಯಲಾರದಷ್ಟು ದುಃಖವಾಯಿತು. ದುಃಖದ ಭರದಲ್ಲಿ ಅವರು ಮುರಲೀಧರನನ್ನು ಅಪ್ಪಿಕೊಂಡು ಅಳಹತ್ತಿದರು. ಆಗ ಮುರಲೀಧರನು ಕ್ಷೀಣಸ್ವರದಿಂದ :— ಮಾವಾ, ಕಳ್ಳರು ಕೊಲೆಗಾರರು ದರೋಡೆಖೋರರು ಮೊದಲಾದವರ ಪಾದದಾಘಾತದಿಂದ ಕಲಂಕಿತವಾದ ಈ ಸ್ಥಾನಕ್ಕೆ ನೀವೇಕೆ ಬಂದಿರಿ? ಅಪರಾಧಗ್ರಸ್ತ ಸಾವಿರಾರು ನರಪಿಶಾಚಿಗಳ ಶ್ವಾಸೋಚ್ಛ್ವಾಸದಿಂದ ಇಲ್ಲಿಯ ಹವೆಯೂ ಕೂಡಾ ದೂಷಿತವಾಗಿರುವದು. ದಯಾಸ್ನೇಹದ ಒಂದೂ ಕೃತಿಗಳು ಇಲ್ಲಿ ದೃಷ್ಟಿಗೆ ಬೀಳುವಂತಿಲ್ಲ. ಇಂಥ ನರಪಿಶಾಚಿಗಳಲ್ಲೊಬ್ಬನಾದವನ್ನನ್ನಪ್ಪಿಕೊಂಡು, ನೀವು ಅಪವಿತ್ರರಾಗಬೇಡಿರಿ. ದಯಮಾಡಿ ಹಿಂದಕ್ಕೆ

ಸರಿಯಿರಿ, ಎಂದು ನುಡಿದು, ಸಾವಕಾಶವಾಗಿ ರಂಗರಾಯರ ಕೈಗಳನ್ನು ಬಿಡಿಸಿಕೊಂಡನು. ದುಃಖದಿಂದ ರಂಗರಾಯರ ಕಂಠವು ಬಿಗಿದು ಹೋಗಿದ್ದರಿಂದ ಅವರಿಗೆ ಮಾತಾಡಲಿಕ್ಕೆ ಬರಲಿಲ್ಲ. ಆಗ ಮಹಾದೇವಪ್ಪನವರು:-ಮುರಲೀಧರ, ನೀವು ಕಳವಿನಿಂದ ಕಲಂಕಿತರೆಂದು ಸರಕಾರಕ್ಕೆ ಮಾತ್ರ ಆಗಿರುವಿರಲ್ಲದೆ ನಮಗಾಗಿಲ್ಲ. ಇನ್ನು ಸ್ವಲ್ಪ ದಿವಸಗಳಲ್ಲಿಯೇ ನೀವು ನಿರ್ದೋಷಿಗಳೆಂದು ಮುಕ್ತರಾಗುವಿರಿ, ಎಂದು ಹೇಳಿದರು.

ಇದೇ ಮಾತನ್ನು ವಕೀಲರೂ ಹೇಳಿದರು; ಆದರೆ ಮುರಲೀಧರನು ನಿರಾಶೆಯಿಂದ ನಕ್ಕು:—ಮಹಾದೇವಪ್ಪನವರೇ, ನಿಮಗೆ ಹುಚ್ಚು ಹಿಡಿದಿದೆ. ಈಗಿನ ಲಂಚಬೊಕ್ಕ ನೌಕರಶಾಹಿಯಲ್ಲಿ ನಮ್ಮಂಥವರಿಗೆ ನ್ಯಾಯ ಸಿಗುವದೇ? ಎಂದನು. ಆಗ ವಕೀಲರು ಮುರಲೀಧರನನ್ನುದ್ದೇಶಿಸಿ:—ನೀವು ಇಷ್ಟಕ್ಕೇ ನಿರಾಶರಾಗಬೇಡಿರಿ. ನ್ಯಾಯಾನ್ಯಾಯಗಳ ವಿಚಾರವು ಇನ್ನೂ ಮುಂದಿದೆ; ನೀವು ಕೋರ್ಟಿನಲ್ಲಿ ನಿಜ ಸಂಗತಿಯನ್ನು ಹೇಳಿಬಿಡಿರಿ; ಅಂದರೆ ನ್ಯಾಯವು ಸಿಕ್ಕೇ ಸಿಗುವದು. ನಿಮ್ಮ ಬಿಡುಗಡೆಗೆ ನಾನು ಹೊಣೆಯಿದ್ದೇನೆ, ಎಂದು ಆಧ್ಯತೆಯಿಂದ ನುಡಿದರು.

ಮುರಲೀಧರನು:—ವಕೀಲ ಮಹಾಶಯರೇ, ನಿಜ ಸಂಗತಿಯನ್ನು ಹೇಳಿದರೂ ಅಷ್ಟೇ, ಬಚ್ಚಿಟ್ಟರೂ ಅಷ್ಟೇ; ನನಗಂತೂ ಬಿಡುಗಡೆಯಾಗಬೇಕೆಂಬ ಆಶೆಯಿಲ್ಲ; ಮತ್ತು ಬಿಡುಗಡೆಯೂ ಆಗುವದಿಲ್ಲ. ನೀವು ವ್ಯರ್ಥ ಶ್ರಮಬಡಬೇಡಿರಿ. ನಿಮ್ಮ ಎಲ್ಲ ಪ್ರಯತ್ನವನ್ನೂ ಅತ್ತಿಗೆ-ತಮ್ಮಂದಿರ ಹಿತಕ್ಕಾಗಿ ವೆಚ್ಚಮಾಡಿರಿ. ನಾನು ಸಂತೋಷದಿಂದ ಅನ್ಯಾಯದ ಶಿಕ್ಷೆಯನ್ನು ಭೋಗಿಸಲಿಕ್ಕೆ ಹೋಗುತ್ತೇನೆ.

ರಂಗರಾಯರು(ಕಣ್ಣೀರುಗಳನ್ನೊರಿಸಿಕೊಳ್ಳುತ್ತ):—ತಮ್ಮಾ, ಹೀಗೆಂದರೆ ಹ್ಯಾಗೆ? ಬಿಡುಗಡೆಯೂಗುವದಿಲ್ಲೆಂದು ನೀನು ಯಾತರ ಮೇಲಿಂದ ಹೇಳುವಿ? ಬಾಯಿಗೆ ಬಂದಂತೆ ಇಲ್ಲದ್ದೊಂದು ಹೇಳಿದರೆ ಯಾವ ಸರಕಾರದಲ್ಲಿ ನ್ಯಾಯವು ಸಿಕ್ಕೀತು? ಇದರಲ್ಲಿ ನಿಜ ಸಂಗತಿಯನ್ನು ಬಚ್ಚಿಟ್ಟರೆ, ಮರ ಕಡಿದು ಮೈಮೇಲೆ ಹಾಕಿಕೊಂಡಂತೆ ಆದೀತು. ನೀನು ಇಲ್ಲದ ಹಾಳು ಉಸಾಬರಿಗೆ ಹೋಗದೆ ನಿಜ ಸಂಗತಿಯನ್ನು ಒಂದುಳಿಯದಂತೆ ಹೇಳಿಬಿಡು. ಈ ನಮ್ಮ ವಕೀಲರೂ ಸಮರ್ಥರಿರುವರು. ಇಂಥ ಎಷ್ಟೋ ಖಟ್ಲೆಗಳನ್ನು ಇವರು ಗೆದ್ದಿರುವರು. ನೀನು ಎಳ್ಳಷ್ಟೂ ಚಿಂತೆಮಾಡಬೇಡ.

ಇನ್ನುಮೇಲೆ ಪ್ರತಿದಿನ ತಪ್ಪದೆ ಔಷಧವನ್ನು ಸೇವಿಸು. ಮೊದಲು ಪ್ರಕೃತಿಯನ್ನು ಸುಧಾರಿಸಿಕೋ. ನನಗೆ ಪೋಲೀಸರು ಹೊಡೆದರು; ನಿಷ್ಕಾರಣ ಮರ್ಯಾದೆಗೇಡು ಮಾಡಿದರು; ಇನ್ನು ಜನರಿಗೆ ಹ್ಯಾಗೆ ಮುಖ ತೋರಿಸಲಿ? ಎಂದು ಸ್ವಲ್ಪೂ ಹಳಹಳಿ ಪಡಬೇಡ.

ಮುರಲೀಧರನು(ಬೇಸರದಿಂದ):—ಮಾವಾ, ಇಲ್ಲದ್ದೊಂದು ಸುಳ್ಳು ಸುಳ್ಳೇ ಹೇಳಿ, ನನ್ನನ್ನು ಸಂತೈಸುವ ಗೊಡವೆಗೆ ಬರಬೇಡಿರಿ. ಕಾಲಚಕ್ರವು ತಿರುಗಿ ಹೋಗಿರುವದರಿಂದ ನನ್ನ ಸುಖದ ದಿವಸಗಳು ಮುಗಿದು ಹೋಗಿವೆ. ಈ ಆಯುಷ್ಯದಲ್ಲಿ ಈ ವರೆಗೆ ಭೋಗಿಸಿದಷ್ಟೇ ಸೌಖ್ಯವಲ್ಲದೆ ಇನ್ನು ಮುಂದೆ ಆ ಸೌಖ್ಯವೂ, ಮರ್ಯಾದೆಯೂ ಬರಲಾರವೆಂದು ನನಗೆ ಅನಿಸುತ್ತದೆ. ಹಾಯ್! ಹಾಯ್!! ಎಂಥ ಅಮರ್ಯಾದೆಯಿದು! ಮಾವಾ ಅತ್ತಿಗೆ-ತಮ್ಮಂದಿರೊಂದಿಗೆ ಬೇಡಿಗಳನ್ನು ಹಾಕಿಕೊಂಡು ಈ ಧಾರವಾಡ ಶಹರದಲ್ಲಿ ತಿರುಗಾಡಿದರೆ ಉಳಿಯಿತೇನು? ನಡೆಯಿರಿ, ಇನ್ನು ಮನೆಗೆ ನಡೆಯಿರಿ. ಉದಾರ ಮನಸ್ಸಿನಿಂದ ಮಾಡಿದ ನಿಮ್ಮಿಬ್ಬರ ಉಪಕಾರಕ್ಕೆ ನಾನು ಯಾವಜನ್ಮವೂ ಋಣಿಯಾಗಿರುವೆನು. ಮಹಾದೇವಪ್ಪನವರೇ, ಈ ನನ್ನ ಬಿರುಸುಮಾತುಗಳಿಗೆ ಸಿಟ್ಟಾಗಬೇಡಿರಿ. ಈ ನಿರ್ಭಾಗ್ಯನ ಹಿತಕ್ಕಾಗಿ ನೀವು ಎಷ್ಟು ಬಡದಾಡಿದರೂ ವ್ಯರ್ಥವೇ! ನನ್ನ ಬೇನೆಯು ವಾಸಿಯಾಗುವದಕ್ಕಾಗಿ ಡಾಕ್ಟರರಿಗೆ ದುಡ್ಡು ಹಾಳುಮಾಡಿಕೊಳ್ಳಬೇಡಿರಿ. ನಾನು ಔಷಧವನ್ನು ತಕ್ಕೊಳ್ಳುವದಿಲ್ಲ; ಮತ್ತು ಬಿಡುಗಡೆಯಾಗುವಂತೆ ಜವಾಬನ್ನೂ ಕೊಡುವದಿಲ್ಲ, ಎಂದು ಹೇಳಿ, ಪಳ ಪಳ ಕಣ್ಣೀರು ಸುರಿಸುತ್ತ ತನ್ನ ಖೋಲಿಗೆ ಹೋಗಿಬಿಟ್ಟನು!

ರಂಗೆರಾಯರೂ, ಮಹಾದೇವಪ್ಪನವರೂ ಮರಮರನೆ ಮರುಗಿದರು; ಮತ್ತು ಅಮರ್ಯಾದೆಯಿಂದ ಹೀಗೆ ಉನ್ಮತ್ತನಾಗಿರುವನೆಂದು ನೆನಿಸಿ, ಮುರಲೀಧರನಿದ್ದ ಖೋಲಿಗೆ ಹೋಗಿ, "ನೀನು ನಿಜ ಸಂಗತಿಯನ್ನು ಬಚ್ಚಿಟ್ಟರೆ, ಕಮಲಾಬಾಯಿ ಮಕರಂದರಿಗೂ ಸಹ ತಪ್ಪದೆ ಕೇಡಾಗುವದೆ"ಂದು ಅನೇಕ ಬಗೆಯಾಗಿ ತಿಳಿಸಿ ಹೇಳಿದರು. ಮುರಲೀಧರನು ಮನಸ್ಸಿಲ್ಲದೆ ಹಿಪ್ಪಿಕೊಂಡು ಔಷಧ ಸೇವಿಸಿದನು. ರಂಗೆರಾಯರು ಆ ದಿವಸದಿಂದ ಮುರಲೀಧರನಿಗೆ ಯಾವ ತೊಂದರೆಯೂ ಆಗದಂತೆ ಅಲ್ಲಿಯೇ ಅವನ ಶುಶ್ರೂಷೆ ಮಾಡಹತ್ತಿದ್ದಲ್ಲದೆ, ಅವನನ್ನು ಬಿಡುಗಡೆ ಮಾಡಿಸಲಿಕ್ಕೆ ಹಿಳಿ

ತಾಗಿ ಪ್ರಯತ್ನ ಮಾಡಹತ್ತಿದರು; ಆದರೆ ಫಿರ್ಯಾದಿಪಕ್ಷದ ಸಾಕ್ಷಿ-ಪುರಾವೆಗಳ ಮೇಲಿಂದಲೂ, ತಮ್ಮ ವಾಕ್ಚಾತುರ್ಯದಿಂದಲೂ, "ಮೋಹಿತೆ" ವಕೀಲರು ಗುಹ್ನೆಯನ್ನು ಚನ್ನಾಗಿ ದೃಢಪಡಿಸಿ, ಮಕರಂದ-ಕಮಲಾಬಾಯಿಯವರನ್ನೂ ಸಹ ಅಪರಾಧಿಗಳನ್ನಾಗಿ ಮಾಡಿಬಿಟ್ಟರು. ಕಮಲಾಬಾಯಿ-ಮಕರಂದರು ಮೊದಲು ಕಬೂಲಿ ಜವಾಬು ಕೊಟ್ಟದ್ದು ಈಗ ಮುಳುವಾಗಿ ಕುಳಿತಿತು. ಆರೋಪಿಯ ಪಕ್ಷದಿಂದ ಮಹಾದೇವಪ್ಪನವರ ಸಾಕ್ಷಿಯಾಯಿತು. ಅವರು ತಮ್ಮ ಸಾಕ್ಷಿಯಲ್ಲಿ ವಿನಾಯಕರಾಯರ ಮನೆಯಲ್ಲಿ ಕಳವು ಆದ ಹೊತ್ತಿಗೆ ಮುರಲೀಧರನು ನಮ್ಮ ಮನೆಯಲ್ಲಿ ಮಾತಾಡುತ್ತ ಕುಳಿತಿದ್ದನು; ಮತ್ತು ಕಂಠಿಯ ಹಾರವನ್ನು ಮುರಲೀಧರನು ಸಾಲದ ರೂಪಾಯಿ ಕೊಟ್ಟು ತೆಗೆದುಕೊಂಡು ಬಂದಿದ್ದಾನೆ. ಆ ರೂಪಾಯಿಗಳನ್ನು ಮುರಲೀಧರನಿಗೆ ನಾನೇ ಕೊಟ್ಟರುತ್ತೇನೆ ಎಂದು ಹೇಳಿದರು.



## ಆರನೆಯ ಪರಿಚ್ಛೇದ.

ಮುಂದೆ ಒಂದು ದಿನ ಮುಂಜಾನೆ ಹತ್ತು ಗಂಟೆಯ ಸಮಯ; ಪ್ರಸಿದ್ಧವಾದ ಮುಂಬಯಿ ಶಹರವು ಜನಸಂದಣಿಯಿಂದ ಒಪ್ಪುತ್ತಲಿದೆ. ವಿಕ್ಟೋರಿಯಾ, ಮೋಟಾರು, ಟ್ರಾಮು, ಸಾಯಕಲ್ಲುಗಳು ತಮ್ಮ ಶೀಘ್ರ ಗತಿಯಿಂದ ಪ್ರವಾಸಿಕರನ್ನು ಅಚ್ಚರಿಗೊಳಿಸುತ್ತಲಿವೆ.

ಇಂಥ ಸಮಯದಲ್ಲಿ ಚರ್ನಿರೋಡ ಸ್ಟೇಶನ್ನದ ಹಿಂದಿನ ಮಗ್ಗಲಿನ ಒಂದು ಮನೆಯ ಮಹಡಿಯ ಮೇಲೆ ಒಬ್ಬ ಸಂನ್ಯಾಸಿಯು ಏನನ್ನೋ ಯೋಚಿಸುತ್ತ ಕುರ್ಚಿಯ ಮೇಲೆ ಕುಳಿತುಕೊಂಡಿದ್ದನು. ಎದುರಿನ ಮೇಜಿನ ಮೇಲೆ ಅನೇಕ ಭಾಷೆಯ ವರ್ತಮಾನಪತ್ರಗಳೂ ಲೇಖನ ಸಾಮುಗ್ರಿಯೂ ವ್ಯವಸ್ಥೆಯಿಂದ ಇಡಲ್ಪಟ್ಟಿದ್ದವು. ಎಡಮಗ್ಗಲು ಎರಡು ಕನ್ನಡಿಯ ಕಪಾಟುಗಳು ದೊಡ್ಡ ದೊಡ್ಡ ಗ್ರಂಥಗಳಿಂದ ಒಪ್ಪುತ್ತಿದ್ದವು. ಗೌರವರ್ಣದ ಆ ಸಂನ್ಯಾಸಿಯ ವಯಸ್ಸು ಮೂವತ್ತಕ್ಕೆ ಮೀರಿತ್ತು. ಅವನು ದೇಹದಿಂದ ಸದೃಢನಿದ್ದನು. ಅವನ ನಿಲುವಿಕೆಯು ಎತ್ತರ. ಸುಂದರವಾದ ಮುಖವು ಬ್ರಹ್ಮಚರ್ಯದ ತೇಜಸ್ಸಿನಿಂದ ಮನೋಹರವಾಗಿತ್ತು. ಅವನು ಶುಭ್ರವಾದ ಒಂದು ಜಿನುಗು ಧೋತರವನ್ನು ಹೊದ್ದುಕೊಂಡು, ಅಂಥದೇ ಒಂದು ನಾಲ್ಕು ಮೊಳದ ತುಂಡನ್ನು ಉಟ್ಟಿದ್ದನು. ಶುಭ್ರವಸ್ತ್ರ, ಭವ್ಯ ಜಟೆಗಳು, ಗಡ್ಡ ಮೀಸೆಗಳು ಇವು ಅವನ ವೈರಾಗ್ಯವನ್ನು ಸೂಚಿಸುತ್ತಿದ್ದವು. ಕೆಲಹೊತ್ತಿನ ಮೇಲೆ ಯೋಚಿಸುತ್ತಿದ್ದ ಸಂನ್ಯಾಸಿಯು ಮೇಜಿನ ಮೇಲಿದ್ದ ಒಂದು ಕನ್ನಡ ವರ್ತಮಾನಪತ್ರವನ್ನು ಶೂನ್ಯದೃಷ್ಟಿಯಿಂದ ನೋಡುತ್ತ:—ವರಿಷ್ಠರ ಅಪ್ಪಣೆಯನ್ನು ಮೀರಲಿಕ್ಕೆ ಬರುವಂತಿಲ್ಲ! ಅವರ ಆಜ್ಞೆಯ ಪ್ರಕಾರ ಧಾರವಾಡಕ್ಕೆ ಹೋಗಲೇಬೇಕಾಗುವದು; ಆದರೆ ಬರಿಗೈಯಿಂದ ಅಲ್ಲಿಗೆ ಹೋಗುವದಾದರೂ ಹ್ಯಾಗೆ? ಹೀಗೆಯೇ ಇನ್ನು ವರ್ಷಾರು ತಿಂಗಳು ಅಜ್ಞಾತವಾಸದಲ್ಲಿದ್ದರೆ, ಎಷ್ಟು ಅನುಕೂಲವಾಗುತ್ತಿತ್ತು? ವಿಪುಲ ಧನದೊಂದಿಗೆ ನನ್ನ ಪೂಜ್ಯ ದೈವತವಾದ ತಾಯಿಯ ದರ್ಶನಕ್ಕೆ ಹೋಗಿದ್ದರೆ, ಅವಳೆಷ್ಟು ಹಿಗ್ಗುತ್ತಿದ್ದಳು!

ಆದರೆ, ಮಾಡುವದೇನು? ಬರಿಗೈಯಿಂದಲೇ ಭೆಟ್ಟಿಯಾದರಾಯಿತು; ಎಂದು ಆತ್ಮಗತವಾಗಿ ನುಡಿದುಕೊಳ್ಳುತ್ತಿರುವಷ್ಟರಲ್ಲಿ ಶೂನ್ಯದೃಷ್ಟಿಯಿಂದ ನೋಡುತ್ತಿರುವ ವರ್ತಮಾನ ಪತ್ರದೊಳಗಿನ "ಅಣ್ಣಾಜಿರಾವ ಕುಲಕರಣಿಯವರ ಕೀರ್ತಿಗೆ ಕಲಂಕ ಹತ್ತಿತು!" ಎಂಬ ಶಿರೋಲೇಖವು ದೃಷ್ಟಿಗೆ ಬಿದ್ದಿತು.

ಕೂಡಲೆ ಸಂನ್ಯಾಸಿಯು ಮೆಟ್ಟಬಿದ್ದು:—ಏನು? ಅಣ್ಣಾಜಿರಾವ ಕುಲಕರ್ಣಿಯವರ ಕೀರ್ತಿಗೆ ಕಲಂಕ ಹತ್ತಿತೇ? ನನ್ನ ಪಿತೃವರ್ಯರ ಕೀರ್ತಿಗೆ ಕಲಂಕವೇ!! ಛೀ ಛೀ, ಅಸಂಭವವು. ಕಲಂಕದ ಸುಳಿಗಾಳಿಯೂ ಕೂಡ ಅವರ ಉಜ್ವಲ ಕೀರ್ತಿಯ ಸಮೀಪಕ್ಕೆ ಸುಳಿಯದು. ಇಡೀ ಕರ್ನಾಟಕದಲ್ಲೆಲ್ಲ ಇದೂವರೆಗೆ ಅವರ ಪಾಂಡಿತ್ಯದ ಯಶೋದುಂದುಭಿಯು ಮೊಳಗುತ್ತಿರಲು, ಅದಾವ ಮತ್ಸರಿಯಿಂದ ಈ ಹೀನ ವಾಕ್ಯವು ಬರೆಯಲ್ಪಟ್ಟಿತು? ಎಲ! ಇದೇನು!! ಇದರ ಕೆಳಗೆ ಇನ್ನೂ ಏನೇನೋ ಬರೆದಿರುವರಲ್ಲಾ! ಎಂದು ನುಡಿದು, ಆ ಲೇಖವನ್ನು ಬಹಳೇ ಆಸ್ಥೆಯಿಂದ ಓದತೊಡಗಿದನು.

ಅದು ಭಾಷಾಂತರ ಎಂಬ ಧಾರವಾಡದ ವರ್ತಮಾನ ಪತ್ರವಾಗಿದ್ದು, ಅದರಲ್ಲಿ ಕೆಳಗೆ ಬರದಂತೆ ಲೇಖವಿತ್ತು:—

ತಾರೀಖು ೭ ನೇ ಜೂನ.

ಅಣ್ಣಾಜಿರಾವ ಕುಲಕರ್ಣಿಯವರ ಕೀರ್ತಿಗೆ ಕಲಂಕ ಹತ್ತಿತು!

"ಅಣ್ಣಾಜಿರಾವ ಡಾಯರೆಕ್ಟರರಿಗೆ ನಾಲ್ವರು ಗಂಡು ಮಕ್ಕಳಿದ್ದು ಹಿರಿಯವನಾದ ರಜನೀಕಾಂತ ಎಂಬವನು ಹನ್ನೆರಡು ವರ್ಷಗಳ ಹಿಂದೆ ಉಡಾಳತನದಿಂದ ಎಲ್ಲಿಗೋ ಓಡಿಹೋಗಿರುವನು. ಆತನ ಪತ್ನಿಯಾದ ಕಮಲಾಬಾಯಿ ಎಂಬವಳು, ಗಂಡನು ಓಡಿ ಹೋದಮೇಲೆ ಅತ್ತೆಯ ಮನೆಗೆ ಬಂದಳು ಆ ಚಾಣಾಕ್ಷಳು ಮುಂದೆ ಹಿಂದೆರಡು ವರ್ಷಗಳೊಳಗೆ ತನ್ನ ಕುಟಿಲ ತಂತ್ರದಿಂದ ಅತ್ತೆಯನ್ನೂ ಚಿಕ್ಕ ಮೈದುನರಾದ ಮುರಲೀಧರ-ಮಕರಂದರನ್ನೂ ಕಟ್ಟಿಕೊಂಡು, ಇದ್ದ ಬಿದ್ದ ಎಲ್ಲ ಆಸ್ತಿಯನ್ನು ಎತ್ತಿಹಾಕಿ, ಲೈನ ಬಾಜಾರದಲ್ಲಿ ಹಿಂದು ಬಾಡಿಗೆಯ ಮನೆಯಲ್ಲಿ ಇರಹತ್ತಿದಳು; ಆದರೂ, ಶಾಂತಸ್ವಭಾವದ ವಿನಾಯಕರಾಯರು ಅದನ್ನು ಸಹಿಸಿಕೊಂಡು, ಹಿಂದೆರಡು ವರ್ಷಗಳಲ್ಲಿಯೇ ಅನೇಕ ಬಗೆಯ ವ್ಯಾಪಾರಗಳಿಂದ, ಮತ್ತೆ

ಧನ ಸಂಗ್ರಹ ಮಾಡಿಕೊಂಡರು. ಇದೂ ಆ ಮತ್ಸರ ಸ್ವಭಾವದ ಅತ್ತೆ-ಸೊಸೆಯರಿಗೆ ಸಹನವಾಗಲಿಲ್ಲ.

ಇದೇ ತಿಂಗಳ ನಾಲ್ಕನೇ ತಾರೀಖಿನ ದಿವಸ ಗದಗಿನ ಒಬ್ಬ ವ್ಯಾಪಾರಸ್ಥನು ವಿನಾಯಕರಾಯರಿಗೆ ಕಳಿಸಿದ ಸಾವಿರ ರೂಪಾಯಿಗಳನ್ನು ಎತ್ತಿ ಹಾಕಿದರು. ಆಗ ಮಿ. 'ಕುಳಿಂದಸ್ವಾಮಿ' ಎಂಬ ಹವಾಲದಾರರು ಮುರಲೀಧರನ ಮನೆಗೆ ಹೋಗಿ, ಅವನನ್ನು ಚನ್ನಾಗಿ ಥಳಿಸಿ ವಿನಾಯಕರಾಯರಿಗೆ ಹಣ ಕೊಡಿಸಿ ಬಂದಿದ್ದರು. ಈ ಎರಡನೆಯ ತಪ್ಪನ್ನೂ ವಿನಾಯಕರಾಯರು ಕ್ಷಮಿಸಿದರು; ಆದರೆ ಈ ಕ್ಷಮೆಯು ಹಾವಿಗೆ ಹಾಲೆರೆದಂತಾಗಿ ಮುಂದೆ ಮೂರು ದಿವಸಗಳ ಮೇಲೆ ಮುರಲೀಧರನು ಸಾಯಂಕಾಲದಲ್ಲಿ ಯಾರೂ ಇಲ್ಲದ ಸಂಧಿಯನ್ನು ಸಾಧಿಸಿ, ವಿನಾಯಕರಾಯರ ಮನೆ ಹೊಕ್ಕು ಕಪಾಟಿನ ಕೀಲೀ ಮುರಿದು, ಒಂದು ಸಾವಿರ ರೂಪಾಯಿಗಳನ್ನೂ ಸಾವಿರ ರೂಪಾಯಿ ಕಿಮ್ಮತ್ತಿನ ದಾಗೀದೆಗಳನ್ನೂ ಕಳವು ಮಾಡಿಕೊಂಡು ಓಡಿಹೋದನು. ಮರುದಿವಸ ವಿನಾಯಕರಾಯರು ಅತ್ತಿಗೆ-ತಮ್ಮಂದಿರ ಮೇಲೆ ಫಿರ್ಯಾದೀ ಮಾಡಿದರು. ಕೂಡಲೆ ಪೋಲೀಸರು ಮುರಲೀಧರನ ಮನೆಯನ್ನು ಜಪ್ತ ಮಾಡಲಾಗಿ ಕಳವಿನ ಕಂಠಿಯು ಹಾರವು ಕಮಲಾಬಾಯಿಯ ಕೊರಳೊಳಗೆ ಸಿಕ್ಕಿತು. ಪೋಲೀಸರು ಆಕೆಯನ್ನು ಚಾವಡಿಗೆ ಕರೆದೊಯ್ದರು. ಮುಂದೆ ಅದೇ ದಿವಸ ರಾತ್ರಿ ಮುರಲೀಧರನು ಸಿಕ್ಕನು. ಅವನ ಅಂಗಝಡತಿಯೊಳಗೆ ಐದುನೂರುರೂಪಾಯಿಗಳೂ ಒಂದು ಬಂಗಾರದ ಬಿಂದಲಿಯ ಜೋಡೂ ಸಿಕ್ಕವು ಉಳಿದ ದಾಗೀನೆ ರೂಪಾಯಿಗಳನ್ನು ಅತ್ತಿಗೆ-ತಮ್ಮಂದಿರ ಕೈಯಲ್ಲಿ ಕೊಟ್ಟಿರುವೆನೆಂದು ಹೇಳಿದನು. ಕಮಲಾಬಾಯಿ-ಮಕರಂದರೂ ಅದಕ್ಕೆ ಒಪ್ಪಿಕೊಂಡು, ಹಿತ್ತಲದೊಳಗಿನ ಹಾಳುಬಾವಿಯಲ್ಲಿ ಒಗೆದಿರುವೆವೆಂದು ಹೇಳಿದರು. ಮರುದಿವಸ ಪೋ. ಇನಸ್ಪೆಕ್ಟರರು ಪಂಚರ ಸಮಕ್ಷಮ ಮೂಲು ತೆಗೆದರು. ಸದ್ಯಕ್ಕೆ ಮುಲೀಧರವೊಬ್ಬನನ್ನೇ ಅಪರಾಧಿಯನ್ನಾಗಿಮಾಡಿ, ಕಮಲಾಬಾಯಿ-ಮಕರಂದರರನ್ನು ಸಾಕ್ಷೀದಾರರನ್ನಾಗಿ ಮಾಡಿರುವರು. ಈಗ ಕಮಲಾಬಾಯಿ-ಮಕರಂದರು "ನಾವು ಬಾವಿಯಲ್ಲಿ ರೂಪಾಯಿ -ದಾಗೀನೆಗಳನ್ನು ಒಗದೇ ಇಲ್ಲವೆ"ಂದು ಸುಳ್ಳು ಸಾಧಿಸಹತ್ತಿದ್ದಾರೆ; ಆದರೆ ಮೊದಲು ಕಬೂಲಿ ಜವಾಬುಗಳನ್ನು ಕೊಟ್ಟಿರುವದರಿಂದ ಈ ಸುಳ್ಳಿನಿಂದ ಯಾವ ಲಾಭವೂ ಆಗದೆ, ಈ ಬಾಯಿ

ಬಡುಕರಿಗೆ ನಾಕವು ಮಾತ್ರ ತಪ್ಪದೇ ಆಗುವದು. ನೋಡಿದಿರಾ! ಡಾಯು ರೆಕ್ಟರರು ಎಂಥ ಸುಪುತ್ರರನ್ನು ಹೆತ್ತುಕೊಂಡವರೆಂಬದನ್ನು?"

ಈ ಲೇಖವನ್ನೋದಿದ ವೇಳೆ ಸಂನ್ಯಾಸಿಯು ಭಯಚಕಿತನಾಗಿ:—ಈಗ ನಾನು ಏನು ಓದಿದೆನು? ಎಂಥ ವಿಷಮಯ ಸುದ್ದಿಯಿದು! ಮುರಲೀಧರ-ಮಕರಂದರು ವಿನಾಯಕನ ಮನೆಯಲ್ಲಿ ಕಳವು ಮಾಡಿರುವರೇ? ಕಮಲೆಯು ಕುಟಿಲ ತಂತ್ರಳೇ? ಸಾವಿರ ರೂಪಾಯಿಗಳನ್ನು ಗದಗಿನ ವ್ಯಾಪಾರಸ್ಥನು ವಿನಾಯಕನಿಗೆ ಕಳಿಸಿದ್ದನೇ? ಅಯ್ಯೋ! ಈ ದುಷ್ಕೃತನಕ್ಕೆ ಏನೆನ್ನಬೇಕು? ಮುರಲೀಧರನಿಗೆ ಸಾವಿರ ರೂಪಾಯಿಗಳನ್ನು ಇದೇ ನಾಲ್ಕನೇ ತಾರೀಖಿಗೆ ಮುಟ್ಟುವಂತೆ ನಾನೇ ಕಳಿಸಿರಲು, ಗದಗಿನ ವ್ಯಾಪಾರಸ್ಥನು ತನಗೆ ಕಳಿಸಿರುವನೆಂದು ವಿನಾಯಕನು ಹ್ಯಾಗೆ ಒಯ್ದನು? ಮತ್ತು ರೂಪಾಯಿ ಕೊಡಲೇಬೇಕಾದರೆ, ಹವಾಲದಾರನು ಮುರಲೀಧರನನ್ನು ಹೊಡೆದನೇ? ಛೀ, ಛೀ! ಪರಮ ಘಾತುಕವು! ಚಿಕ್ಕಂದಿನಲ್ಲಿ ಮುರಲೀಧರನ ಸುಗುಣಗಳು ಪ್ರತಿಯೊಬ್ಬರೂ ಅನುಕರಣ ಮಾಡತಕ್ಕಂಥವಿದ್ದವು. ಇಂಥ ಸುಶೀಲನು ಈಗ ಚೋರನಾದನೇ? ಅಸಂಭವವು. ಇದರಲ್ಲಿ ಏನೋ ಮೋಸವಿರಲಿಕ್ಕೆಬೇಕು. ಮ್ಯಾಟ್ರಿಕ್ ಪರೀಕ್ಷೆಗೆಂದು ಮುರಲೀಧರನು ಇಲ್ಲಿಗೆ ಬಂದಾಗ್ಗೆ ಅವನ ಗುರುಗಳೇ ಅವನ ಸದ್ವರ್ತನವನ್ನು ಬಹಳವಾಗಿ ವರ್ಣಿಸಿದ್ದರು. ಅವನಿಗೆ ನಾನು ಭೆಟ್ಟಿಯಾದಾಗ್ಗೆ ನನ್ನನ್ನು ಅವನು ಗುರುತಿಸಲಿಲ್ಲ. ಹಾಗೆಯೇ ನಮ್ರತೆಯಿಂದ ತಲೆಬಾಗಿಸಿದನು; ಆದರೆ ಮುರಲೀ, ನಿನ್ನಂಥ ಸುವಿಚಾರಿಗೆ ಕಳವಿನ ಅರೋಪವೇ? ಮತ್ತು ಕಾರಾಗೃಹವಾಸವೇ! ನಿಮ್ಮನ್ನು ಈ ದುಃಖಸಾಗರದೊಳಗಿಂದ ಪಾರುಮಾಡಿಕೊಳ್ಳತಕ್ಕವರು ಅಲ್ಲಿ ಯಾರೂ ಇಲ್ಲದಾಯಿತೇ! ಯಾರಿರುವರು? ಗೆದ್ದ ಎತ್ತಿನ ಬಾಲ ಹಿಡಿಯುವ ಈಗಿನ ನೀಚ ಪರಿಸ್ಥಿತಿಯಲ್ಲಿ ಯಾರು ಸಹಾಯ ಮಾಡಬೇಕು? ಎಲ್ಲರೂ ಧನಿಕನಾದ ವಿನಾಯಕನ ಬಾಲ ಬಡಿಯುತ್ತಿರಬಹುದು. ಕಮಲಾ! ಗರ್ಭ ಶ್ರೀಮಂತರ ಮನೆಯಲ್ಲಿ ಹುಟ್ಟಿ, ಇಂಥ ದಯಾಶೂನ್ಯನ ಕೈಹಿಡಿದು ಕೋರ್ಟಿನ ಕಟ್ಟೆಯನ್ನು ಹತ್ತಬೇಕಾಯಿತಲ್ಲವೇ? ಮಕರಂದಾ! ಒಡಹುಟ್ಟಿದ ಅಣ್ಣನ ಈ ದುರವಸ್ಥೆಯನ್ನು ನೋಡಿ, ನೀನೆಷ್ಟು ಶೋಕಿಸಿದ್ದೀ? ಧಿಕ್ಕಾರವು! ರಜನೀ, ನಿನ್ನ ಜನ್ಮಕ್ಕೆ ಧಿಕ್ಕಾರವು!! ಜನ್ಮಕೊಟ್ಟ ತಾಯಿಯು ಅನಿವಾರ್ಯ ದುಃಖದಿಂದ ಬಳಲುತ್ತಿರಲು, ನೀನು ದಾಸ-ದಾಸಿಯರಿಂದ

ಕೂಡಿಕೊಂಡು ಸುಖದಿಂದ ಮೆರೆಯುತ್ತಿರುವೆಯಾ? ಏಳು ಸಿದ್ಧನಾಗು. ನಿನ್ನ ಅಜ್ಞಾತವಾಸವನ್ನು ಸುಡು. ಇನ್ನಾದರೂ ಮುಪ್ಪಿನ ತಾಯಿಯ ಶುಶ್ರೂಷೆ ಮಾಡಿ, ಜನ್ಮಸಾರ್ಥಕ ಮಾಡಿಕೋ. ನಿನ್ನ ಹನ್ನೆರಡು ವರ್ಷದ ವಿಯೋಗದಿಂದ ಖಿನ್ನಳಾಗಿ ಪವಿತ್ರತೆಯಿಂದ ಕಾದುಕೊಂಡು ಕೂತಿರುವ ಪತ್ನಿಯನ್ನು ಅಪ್ಪಿಕೊಂಡು ಮುದ್ದಾಡು! ನಿನ್ನ ಚಿಕ್ಕ ತಮ್ಮಂದಿರಿಗೆ ಸಹಾಯ ಮಾಡಿ ಸಂತೈಸು! ಒಂದು ಪಕ್ಷದಲ್ಲಿ ಮುರಲೀಧರನು ಕಳವು ಮಾಡಿದ್ದರೂ ಬಿಡಿಸುವಷ್ಟು ಸಾಮರ್ಥ್ಯವು ನಿನ್ನಲ್ಲಿರುತ್ತಿರಲು, ಅಂಜುವ ದೇಕೆ? ಬೇಡ-ಬೇಡ. ಅನ್ಯಾಯವು ಸರ್ವಥಾ ಬೇಡ. ಪಾಪಕ್ಕೆ ಪ್ರಾಯಶ್ಚಿತ್ತವಾಗಲೇ ಬೇಕು. ಮುರಲೀಧರ-ಮಕರಂದರು ನನ್ನ ತಮ್ಮಂದಿರಾಗಿದ್ದರೂ ಸಹ ಈ ನಿಂದ ಕೃತ್ಯವನ್ನು ಮಾಡಿದ್ದರೆ, ಶಿಕ್ಷೆಯನ್ನನುಭವಿಸಲೇ ಬೇಕಾಗುವದು; ಆದರೆ ನಿರಪರಾಧಿಗಳಿದ್ದರೆ ಮಾತ್ರ ಶಿಕ್ಷೆಯನ್ನನುಭವಿಸಲು, ಜೇಲಿಗೆ ಹೋಗಿದ್ದರೂ ಈ ರಜನಿಯು ಬಿಡಿಸಿಕೊಂಡು ಬರಲಿಕ್ಕೆ ಸಮರ್ಥನಿದ್ದಾನೆ. ಪ್ರಿಯೆ ಕಮಲಾ! ಮಾಸಪತ್ರಿಕೆಗಳಲ್ಲಿ ನಿನ್ನ ಅನೇಕ ಸರಸ ನೀತಿಬೋಧಕ ಲೇಖಗಳನ್ನು ಓದಿರುವೆನು; ಮತ್ತು ನಿನ್ನಿಂದಲೇ ಬರೆಯಲ್ಪಟ್ಟ "ಗೃಹಿಣೀ ಬೋಧ"ವೆಂಬ ಪುಸ್ತಕವು ಸುತ್ಯವಾಗಿರುವದು. ಇಂಥ ಗುಣನಿಧಿಯಾದ ನೀನು ಕಳವಿಗೆ ಸಹಾಯಕಳಾದೆಯಾ! ಸುಳ್ಳು, ಇದೆಲ್ಲವೂ ಸುಳ್ಳು. ಹುಟ್ಟಾ ನೀಚನಾದ ವಿನಾಯಕನು ಘಾತುಕತನ ಮಾಡಿರಲೇ ಬೇಕು. ಸ್ವಜನದ್ರೋಹಿಯಾದ ವಿನಾಯಕಾ! ಈ ಖಟ್ಲೆಯಲ್ಲಿ ನೀನು ಮೋಸಗಾರಿಕೆಯನ್ನು ಮಾಡಿದ್ದೇ ನಿಜವಿದ್ದರೆ, ಮುರಲೀಧರನ ಈಗಿನ ಸ್ಥಳವನ್ನು ನೀನು ಆಕ್ರಮಿಸಬೇಕಾಗುವದು. ಇರಲಿ. ಅಲ್ಲಿಯ ಯಾವ ನಿಜ ಸಂಗತಿಯೂ ಗೊತ್ತಿಲ್ಲದೆ ಹೆಚ್ಚಿಗೆ ಮಾತಾಡಿ ಪ್ರಯೋಜನವಿಲ್ಲ, ಎಂದು ಬಾಗಿಲ ಕಡೆಗೆ ಮುಖದಿರುವಿ "ಮುಹಮ್ಮದ-ಮುಹಮ್ಮದ" ಎಂದು ಕೂಗಿದನು. ಕೂಡಲೆ ಶಸ್ತ್ರದಿಂದ ಸಜ್ಜಾಗಿದ್ದ ಒಬ್ಬ ಪೋಲೀಸನು ಒಳಗೆ ಬಂದು, ನೆಲಮುಟ್ಟ ನಮಸ್ಕಾರ ಮಾಡಿ, ನಿಂತುಕೊಂಡನು. ಸಂನ್ಯಾಸಿಯು ಅವಸರದಿಂದ:—"ನಾನು ಈಗಲೇ ಧಾರವಾಡಕ್ಕೆ ಹೋಗಬೇಕಾಗಿರುವದು. ಪ್ರವಾಸದ ಎಲ್ಲ ಸಾಹಿತ್ಯಗಳನ್ನು ಕಟ್ಟಿ ಇಡು; ಮತ್ತು ನಾನು ಊಟ ಮಾಡಿ ಬರುವದರೊಳ

ಗಾಗಿ "ಜಾನ್ ಸಾಹೇಬರನ್ನು ಕರೆದುಕೊಂಡು ಬಾ" ಎಂದು ಹೇಳಿ ಒಳಗೆ ಹೋದನು.

+++ +++ +++ +++ +++

ಈ ದಿವಸ ಮುರಲೀಧರನ ಜವಾಬು ಇದ್ದದರಿಂದ ಧಾರವಾಡದ ಬೆಂಚ ಕೋರ್ಟಿನ ಮುಂದೆ ಸಂಜೆಯ ನಾಲ್ಕು ಘಂಟೆಗೆ ಜನರು ನೆರೆದಿದ್ದರು. ಮ್ಯಾಜಿಸ್ಟ್ರೇಟರ ಎದುರಿನ ಕಟಾಂಜನದಲ್ಲಿ ಮುರಲೀಧರನು ವಿನಯದಿಂದಲೂ ದುಃಖದಿಂದಲೂ ಅವನತ ಮುಖನಾಗಿ ನಿಂತುಕೊಂಡಿದ್ದನು. ಫಿರ್ಯಾದಿ ಹಾಗು ಆರೋಪಿ ಪಕ್ಷದ ವಕೀಲರು ಉತ್ಸುಕತೆಯಿಂದ ಮ್ಯಾಜಿಸ್ಟ್ರೇಟರ ಮುಖ ನೋಡುತ್ತ ಎದುರುಬದರಾಗಿ ಕುಳಿತುಕೊಂಡಿದ್ದರು. ಕಾರಕೂನನಂತೂ ಮಸಿಯೆದ್ದಿದ ಟಾಕನ್ನು ಹಿಡಿದುಕೊಂಡು ಬರೆಯಲಿಕ್ಕೆ ಸಿದ್ಧನಾಗಿಯೇ ಕುಳಿತುಕೊಂಡಿದ್ದನು. ಈ ದಿವಸ ಮುರಲೀಧರನ ಜವಾಬನ್ನು ಕೇಳಲಿಕ್ಕೆ ಪೋಲೀಸ ಇನಸ್ಪೆಕ್ಟರರು ಸ್ವತಃ ಬಂದಿದ್ದರು. ಇಷ್ಟು ಜನರು ಒಂದೇ ಸ್ಥಳದಲ್ಲಿ ಕೂಡಿದ್ದರೂ ಯಾರೂ ಮಾತಾಡದೆ ಸ್ತಬ್ಧರಾಗಿದ್ದರು. ಈಗ ಮ್ಯಾಜಿಸ್ಟ್ರೇಟ ಸಾಹೇಬರು ಸುತ್ತುಮುತ್ತು ನೆಲೆಗೊಂಡಿದ್ದ ಶಾಂತತೆಯನ್ನು ಭಂಗಗೊಳಿಸಿ, ಮುರಲೀಧರನನ್ನುದ್ದೇಶಿಸಿ ಶಾಂತಸ್ವರದಿಂದಃ—"ಮುರಲೀಧರ, ನಾನು ಕೇಳಿದ ಪ್ರಶ್ನೆಗಳಿಗೆ ದೇವರನ್ನು ಸ್ಮರಿಸಿ, ಉತ್ತರ ಕೊಡು."

ಮುರಲೀಧರ(ವಿಚಿತ್ರವಾದ ನಗೆಯಿಂದ):—"ಧರ್ಮಪ್ರಭುಗಳೇ, ಅನ್ಯಾಯಮಯವಾದ ಈ ಯುಗದಲ್ಲಿ ದೇವರನ್ನು ಸ್ಮರಿಸಿ, ಸುಳ್ಳು ಹೇಳಿದರೆ, ಪಾಪ ಬರುವಂತಿಲ್ಲ; ನಿಜ ಹೇಳಿದರೆ, ಪುಣ್ಯ ಬರುವಂತಿಲ್ಲ; ಈ ದೂಷಿತ ಸರಕಾರದಲ್ಲಿ ಕುಲಕಂಟಕರ ಮನೆಮುರುಕ ಮಾತುಗಳಿಗೇ ಮಹತ್ವವಿರುವದಲ್ಲದೆ, ಸಜ್ಜನರ ಸತ್ಯಮಾತುಗಳಿಗೆ ಮಹತ್ವವಿಲ್ಲ; ಮತ್ತು ಪಾಪಮಯವಾದ ಈ ಕಲಿಯುಗವು ದೇವರ ಅಧಿಕಾರಕ್ಕೆ ಹೊರತಾಗಿರುವಂತೆ ತೋರುತ್ತದೆ. ಅಂದಮೇಲೆ ಸುಳ್ಳು ಹೇಳಿದರೂ ಅಷ್ಟೇ, ಸತ್ಯ ಹೇಳಿದರೂ ಅಷ್ಟೇ; ಆದರೂ, ನನ್ನ ಈ ಪರತಂತ್ರಾವಸ್ಥೆಯಲ್ಲಿ ಹೇಳಿದಂತೆ ಕೇಳಬೇಕಲ್ಲವೇ? ಹೂಂ, ರಾವಸಾಹೇಬ ಕೇಳಿರಿ. ನಿಮ್ಮ ಪ್ರಶ್ನೆಗಳಿಗೆ ದೇವರನ್ನು ಸ್ಮರಿಸಿ, ಉತ್ತರ ಕೊಡುತ್ತೇನೆ."

ಮ್ಯಾಜಿಸ್ಟ್ರೇಟರು(ಮೇಜಿನ ಮೇಲೆ ಇದ್ದ ದಾಗೀನೆ-ರೂಪಾಯಿಗಳನ್ನು

ಕೋರಿಸಿ):—"ಈ ಮಾಲನ್ನು ನೀನು ವಿನಾಯಕರಾಯರ ಮನೆಯಲ್ಲಿ ಕಳವು ಮಾಡಿದ್ದಿಯೋ ಇಲ್ಲವೋ?"

ಮುರಲೀಧರ:—ಕಳವು ಮಾಡಿಲ್ಲ. ಛೀ, ಛೀ, ಹೌದು ಕಳವು ಮಾಡಿರುವೆನು, ಎಂದು ಕುಂಠಿತ ಸ್ವರದಿಂದ ಉತ್ತರ ಕೊಟ್ಟನು. ಕೂಡಲೆ ಹೊರಗೆ ನಿಂತುಕೊಂಡಿದ್ದ ಮಹಾದೇವಪ್ಪ-ರಂಗರಾಯರ ಮುಖಗಳು ಬತ್ತಿ ಹೋದವು. ಕುಳಿಂದಸ್ವಾಮಿ-ವಿನಾಯಕರಾಯರು ಮುರಲೀಧರನ ಈ ಉತ್ತರವನ್ನು ಕೇಳಿ, ಸಂತೋಷದಿಂದ ನಲಿದಾಡಿದರೆಂದು ಹೇಳುವ ಕಾರಣವಿಲ್ಲ. ಈಗ ಆರೋಪಿಯ ಪಕ್ಷದ ಕಿಲ್ಲೇದಾರ ವಕೀಲರ ತಲೆಯ ಮೇಲಂತೂ ಒಮ್ಮೆಲೆ ವಜ್ರಪ್ರಘಾತವಾದಂತಾಯಿತು. ಅವರು ಚಟ್ಟನೆ ಎದ್ದು ನಿಂತು, ಇಂಗ್ಲಿಷ ಭಾಷೆಯಲ್ಲಿ ಈ ಪ್ರಕಾರವಾಗಿ ವಿನಂತಿ ಮಾಡಿಕೊಂಡರು:—

"ಆರೋಪಿಯ ತಲೆತಿರುಗಿದಂತಾಗಿರುವದು. ತಪ್ಪು ಮಾಡಿದ ಮನುಷ್ಯನು ತನ್ನ ತಪ್ಪನ್ನು ಎಂದೂ ಇಷ್ಟು ಸುಲಭ ಉಪಾಯಕ್ಕೆ ಒಪ್ಪಿಕೊಳ್ಳಲಾರನು. ಮಾನ್ಯರಾದ ನ್ಯಾಯಮೂರ್ತಿಗಳೇ, ಮಾನಧನರಿಗೆ ಪೋಲೀಸರ ಅನ್ಯಾಯದಿಂದ ಅಸಹ್ಯ ಅಪಮಾನವಾಗುತ್ತಿರಲು, ಯಾವ ಸದ್ಗೃಹಸ್ಥನ ಬುದ್ಧಿಯೂ ಶುದ್ಧಿಯ ಮೇಲೆ ಇರಲಾರದು! ಮತ್ತು ಈ ಆರೋಪಿಗೆ ಭಯಂಕರ ರೋಗವು ಅಂಟಿಕೊಂಡಿರುವದರಿಂದ ಇವನ ಬುದ್ಧಿಯು ಭ್ರಂಶವಾಗಿ ಹೋಗಿರುವದು; ಆದರೆ ಉನ್ಮತ್ತ ಆರೋಪಿಯ ಈ ಅಸಂಬದ್ಧ ಪ್ರಲಾಪದ ಕಡೆಗೆ ಕೋರ್ಟು ಸ್ವಲ್ಪು ಲಕ್ಷ್ಯಗೊಡಲಿಕ್ಕಿಲ್ಲವೆಂದು ನಂಬುತ್ತೇನೆ."

ಆದರೆ ಫಲವೇನು? ವಕೀಲರು ಇಷ್ಟು ಹೇಳಿಕೊಂಡು ಕೂಡ್ರುವದರೊಳಗಾಗಿ ಮುರಲೀಧರನು ತಾನೂ ಇಂಗ್ಲೀಷಿನಿಂದ:—ವಕೀಲರು ಹೇಳುವದು ತೀರಾ ಸುಳ್ಳು. ನನ್ನ ಬುದ್ಧಿಯು ಭ್ರಂಶವಾಗಿಲ್ಲ. ನಾನು ಒಳ್ಳೇ ಶುದ್ಧಿಯ ಮೇಲೆ ಇದ್ದೇನೆ. ಕಳ್ಳನಿಗೆ ಮಾನಾಪಮಾನದ ಲಕ್ಷ್ಯವೇ? ಪೂಜ್ಯರಾದ ಧರ್ಮಪ್ರಭುಗಳೇ, ನಾನು ಅಣ್ಣನ ಮನೆಯಲ್ಲಿ ಕಳವು ಮಾಡಿದ್ದು ಸತ್ಯವು; ಆದರೆ ಆ ಕಳವಿನ ದಾಗೀನೆಗಳನ್ನು ನಾನೇ ಆ ಹಾಳು ಭಾವಿಯಲ್ಲಿ ಒಗೆದೆನಲ್ಲದೆ, ಅತ್ತಿಗೆ-ತಮ್ಮಂದಿರು ಒಗೆದಿಲ್ಲ. ಅವರಿಗೆ ಈ ಕಳವಿನ ಬಗ್ಗೆ ಏನೂ ಗೊತ್ತಿಲ್ಲ. ಅಣ್ಣನಿಗೆ ದ್ರೋಹನೆಸಗಿದ ಈ ಪಾಪಿಗೆ

ಯಾವದಾದರೊಂದು ತೀಕ್ಷ್ಣ ಶಿಕ್ಷೆಯನ್ನು ವಿಧಿಸಿ, ಈ ಧಾರವಾಡದಿಂದ ಮೊದಲು ಕಳಿಸಿರಿ; ಎಂದು ಹೇಳಿ, ಸುಮ್ಮನಾದನು.

ವಕೀಲರು ಮತ್ತೆ ಎದ್ದು ನಿಂತು ಕೋರ್ಟಿಗೆ ಪೂರ್ವಾಪರ ನಿಜ ಸಂಗತಿಯನ್ನೆಲ್ಲ ಹೇಳಿಕೊಂಡರು; ಆದರೆ, ಕೋರ್ಟಿಗೆ ಅದು ಒಪ್ಪಿಗೆಯಾಗ ಲಿಲ್ಲ. ಕೆಲ ಹೊತ್ತಿನವರೆಗೆ ಪೃಚ್ಛಾ ಪೃಚ್ಛವಾಗಿ, ಮ್ಯಾಜಿಸ್ಟ್ರೇಟರೂ ಪಂಚರೂ ಕೂಡಿ ಈ ಪ್ರಕಾರವಾಗಿ ನಿರ್ಣಯಿಸಿದರು:—"ಮುರಲೀಧರನು ಕಳವು ಮಾಡಿ, ದಾಗೀನೆ-ರೂಪಾಯಿಗಳನ್ನು ಕಮಲಾಬಾಯಿ-ಮಕರಂದರ ಕೈಯಲ್ಲಿ ಬಚ್ಚಿಡಲಿಕ್ಕೆ ಕೊಟ್ಟಿದ್ದು ನಿಶ್ಚಯವು; ಮತ್ತು ಕಂಠಿಯ ಹಾರವೂ ಕಳವಿನದೇ. ಅತ್ತಿಗೆ-ತಮ್ಮಂದಿರನ್ನು ಉಳಿಸುವದಕ್ಕಾಗಿ ಆರೋಪಿಯು ಈಗ ತಾನೇ ದಾಗೀನೆ-ರೂಪಾಯಿಗಳನ್ನು ಬಾವಿಯಲ್ಲಿ ಒಗೆದೆನೆಂದು ಸುಳ್ಳು ಹೇಳುತ್ತಾನೆ. ಕಮಲಾಬಾಯಿಗೆ ಈ ಕಳವಿನ ಸಂಗತಿಯು ಗೊತ್ತಿರದಿದ್ದರೆ, ಕೊರಳಲ್ಲಿ ಕಳವಿನ ಕಂಠಿಯ ಹಾರವು ಎಲ್ಲಿಂದ ಬಂತು? ಕಾರಣ ಮೂವರೂ ಆರೋಪಿಗಳಾಗಿರುತ್ತಾರೆ. ಸದ್ಯದ ಆರೋಪಿಯ ಬಗ್ಗೆ ನಾಳೆಗೆ ಠರಾವು ಹೇಳಿದ ಬಳಿಕ, ಕಮಲಾಬಾಯಿ-ಮಕರಂದರನ್ನು ಆರೋಪಿಯರನ್ನಾಗಿ ಮಾಡತಕ್ಕದ್ದು."

ಸಂಜೆಯು ಆರು ಘಂಟೆಯಾಯಿತು. ಮ್ಯಾಜಿಸ್ಟ್ರೇಟರು ಹಾಗು ಪಂಚರು ಕೋರ್ಟಿನ ಹಿಂದೆಯೇ ಇರುವ ಕ್ಲಬ್ಬಿಗೆ ಹೋದರು. ಕೋರ್ಟು ಬರಖಾಸ್ತವಾಯಿತು. ಎಂದಿನಂತೆ ಮುರಲೀಧರನಿಗೆ ಬೇಡಿಯನ್ನು ತೊಡಿಸಿ, ಸೆರೆಮನೆಗೆ ಒಯ್ದರು.



## ಏಳನೆಯ ಪರಿಚ್ಛೇದ.

-----

ಈ ದಿವಸ ಮೋಹಿತೆ ವಕೀಲರು ಮುಂಜಾನೆ ೮ ಗಂಟೆಯ ಸಮಯಕ್ಕೆ ತಮ್ಮ ಖೋಲಿಯಲ್ಲಿ ಆನಂದದಿಂದ ಕುಳಿತುಕೊಂಡಿದ್ದರು. ಅವರ ಮುಂದೆ ಪಕ್ಷಗಾರರ ಸಮೂಹವು ಕುಳಿತುಕೊಂಡಿತ್ತು. ವಕೀಲರು ವಿನಾಯಕರಾಯರ ಖಟ್ಲೆಯಲ್ಲಿ ಜಯವಾಗುವದೆಂದು ಉಬ್ಬುಬ್ಬಿ ಏನೇನೋ ಹೇಳುತ್ತಿದ್ದರು.

ಅಷ್ಟರಲ್ಲಿ ಪ್ರೌಢ ವಯಸ್ಸಿನ ಒಬ್ಬ ವಿರಕ್ತನು ಕಡಾವಿಗೆಗಳ ಕಟ್ಟ ಕಟ್ಟ ಎಂಬ ಸಪ್ಪಳದೊಂದಿಗೆ ಒಳಗೆ ಬಂದನು. ಕೂಡಲೆ ವಕೀಲರು ಆತನನ್ನು ಬಹಳೇ ಆದರದಿಂದ ಬರಮಾಡಿಕೊಂಡು ಕುರ್ಚಿಯಮೇಲೆ ಕೂಡ್ರಿಸಿದರು.

ಬಳಿಕ ವಿರಕ್ತರು ವಕೀಲರನ್ನು ಕುರಿತು:—ಮೋಹಿತೆ ವಕೀಲರೆಂದರೆ ನೀವೇ ಏನು? ಎಂದು ಇಂಗ್ಲಿಷಿನಲ್ಲಿ ಕೇಳಿದರು ವಕೀಲರು ತಲೆ ಹಾಕುತ್ತ "ಹೌದು ಮಹಾಶಯರೆ, ನಾನೇ" ಎಂದು ಇಂಗ್ಲಿಷಿನಿಂದಲೇ ಉತ್ತರ ಕೊಟ್ಟರು.

ವಿರಕ್ತರು:—ನಿಮ್ಮ ಪಾಂಡಿತ್ಯದ ಕೀರ್ತಿಯನ್ನು ಮಿ. ವಿನಾಯಕರಾವ ಕುಲಕರ್ಣಿ ಇವರಿಂದ ಕೇಳಿಕೊಂಡು ಇಲ್ಲಿಗೆ ಬಂದಿರುವೆನು. ನಮ್ಮದೊಂದು ಮಹತ್ವದ ಖಟ್ಲೆಯು ಹುಬ್ಬಳ್ಳಿಯ ಕೋರ್ಟಿನಲ್ಲಿ ನಡೆದದೆ. ಅದಕ್ಕೆ ನಿಮ್ಮಂಥ ಜಾಣ ವಕೀಲರೇ ಬೇಕಾಗಿರುವರು.

ವಕೀಲರು:—ಒಹೋ! ಅಗತ್ಯವಾಗಲಿ; ಆದರೆ ನಿಮ್ಮ ನಿವಾಸಸ್ಥಾನವಾವದು? ತಿಳಿಯಲಿಲ್ಲ.

ವಿರಕ್ತರು:—ನಮ್ಮ ನಿವಾಸಸ್ಥಾನವೇ? ಹುಬ್ಬಳ್ಳಿತಾಲೂಕಪೈಕಿ ಅರಳೀಕಟ್ಟಿ. ನಮಗೂ ವಿನಾಯಕರಾಯರಿಗೂ ಬಹಳ ಪರಿಚಯ; ಮೊನ್ನಿನ ದಿವಸ ವಿನಾಯಕರಾಯರು ತಮ್ಮ ಖಟ್ಲೆಯ ಸಾದ್ಯಂತ ಸಂಗತಿಗಳನ್ನೂ, ಅದರಲ್ಲಿ ನಿಮ್ಮಿಂದ ಹೇಳಲ್ಪಟ್ಟ ಗಹನ ತಂತ್ರಗಳನ್ನೂ ಬಹಳ ವರ್ಣಿಸಿದರು. ಅದೆಲ್ಲವನ್ನು ಕೇಳಿಕೊಂಡು ನಮ್ಮ ಖಟ್ಲೆಗೂ ನಿಮ್ಮನ್ನೇ ಕೊಡಬೇಕೆಂಬ

ಇಚ್ಛೆಯಿಂದ ಇಲ್ಲಿಯ ವರೆಗೆ ಬಂದಿರುತ್ತೇನೆ ಸೈ, ಸೈ! ಒಳ್ಳೆಯ ಜಾಣತನವು! ಮುರಲೀಧರನು ಘನಾರಿಯಾಗಿರುವನೆಂದು ನೀವೇನು ತೋರಿಸಿ ಕೊಟ್ಟಿರುವಿರಲ್ಲಾ, ಅದನ್ನು ಕೇಳಿ ನಾನು ವಿಸ್ಮಯಬಟ್ಟೆನು!

ವಕೀಲರು:— ಪೋಲೀಸರಲ್ಲಿ ಒಬ್ಬ ಪ್ರಮುಖ ಮನುಷ್ಯನು ಇತ್ತ ಕಡೆಗೆ ಇದ್ದರಿಂದಲೇ ಇಷ್ಟೆಲ್ಲ ಸಾಧಿಸಿತು; ಇಲ್ಲದಿದ್ದರೆ ಸಾಧಿಸುವದುಂಟೇ?

ವಿರಕ್ತರು:—ಹೌದು ವಿನಾಯಕರಾಯರು ಆ ಮಹನೀಯರ ಹೆಸರನ್ನೂ ಹೇಳಿದರು. ಅವರು ಹವಾಲದಾರರಿರುವರಂತೆ. ನನಗೆ ಅವರ ಹೆಸರು ಲಕ್ಷ್ಯದಲ್ಲಿ ಉಳಿಯಲಿಲ್ಲ. ಕಂಠಿಯಹಾರವನ್ನು ಒತ್ತಿ ಇಟ್ಟಿದ್ದರು; ರೂಪಾಯಿ ಜಮೆ ಬರಕೊಂಡಿದ್ದಿಲ್ಲ. ಇನಸ್ಪೆಕ್ಟರರಿಗೆ ತಿಳಿಯದಂತೆ ಮುರಲೀಧರನಿಗೆ ಚನ್ನಾಗಿ ಥಳಿಸಿದೆವು. ಹಾಗೆ ಹೀಗೆ ಎಂದು ಏನೇನೋ ಹೇಳಿದರು. ನಾನದನ್ನು ಮನಃಪೂರ್ವಕ ಕೇಳಲಿಲ್ಲ. ಆ ಪ್ರಕರಣದ ನಿಜ ಸಂಗತಿಯನ್ನು ಇನ್ನೊಮ್ಮೆ ಹೇಳಿರಿ ನೋಡೋಣ?

ವಕೀಲರು:—ಆ ಪ್ರಕರಣವನ್ನು ಒಮ್ಮೆ ಕೇಳಿದರೆ ಚನ್ನಾಗಿ ತಿಳಿಯುವಂತೆಯೇ ಇಲ್ಲ ನನಗಿಂತಲೂ ವಿನಾಯಕರಾಯರಿಗೆ ಕುಳಿಂದಸ್ವಾಮಿ ಹವಾಲದಾರರು ಒಳಿತಾಗಿ ಸಹಾಯಮಾಡಿರುವರು. ಬಾವಿಗೆ ಒಗೆಯಲಿಕ್ಕೆ ಹೋದಾಗ್ಗೆ ಮುರಲೀಧರನನ್ನು ಅಂಜಿಸಿ, ಹಾಳುಕಿಲ್ಲೆಯಲ್ಲಿಟ್ಟು, ಅವನ ಅರಿವೆಯ ಗಂಟಿನಲ್ಲಿ ದಾಗೀನೆ-ರೂಪಾಯಿಗಳನ್ನು ಕಟ್ಟಿದವರೇ ಕುಳಿಂದಸ್ವಾಮಿಯುವರು. ಮುಂದೆ ರಾತ್ರಿ ಮುರಲೀಧರನನ್ನು ಕಿಲ್ಲೆಯಿಂದ ಹೊರಗೆಡವಿ ಗಂಟಿನಲ್ಲಿ ಕಟ್ಟಿದ ದಾಗೀನೆ-ರೂಪಾಯಿಗಳ ಆಧಾರದಿಂದ ಕಳವು ಮಾಡಿದ್ದೇ ನಿಜವೆಂದು ಇನಸ್ಪೆಕ್ಟರರಿಗೆ ತೋರಿಸಿಕೊಟ್ಟರು. ಮುಂದೆ ಮುರಲೀಧರನನ್ನು ಮನಬಂದಂತೆ ಹೊಡೆದು, ಕಳವು ಮಾಡಿ ಎಲ್ಲ ದಾಗೀನೆ-ರೂಪಾಯಿಗಳನ್ನು ಹಿತ್ತಲದೊಳಗಿನ ಹಾಳುಬಾವಿಯಲ್ಲಿ ಒಗೆದಿರುವೆವು, ಎಂದು ಇನಸ್ಪೆಕ್ಟರರ ಮುಂದೆ ಹೇಳಿಸಿದರು. ಮತ್ತೆ ಮೊದಲೇ ಆ ಹಾಳುಬಾವಿಯಲ್ಲಿ ಒಗೆದಿದ್ದ ದಾಗೀನೆ ರೂಪಾಯಿಗಳನ್ನು ಇನಸ್ಪೆಕ್ಟರರ ಸಮಕ್ಷಮ ತೆಗೆಯಿಸಿ, ಪಂಚನಾಮೆ ಮಾಡಿಸಿ, ಮೂವರನ್ನೂ ಕಬೂಲಿ ಜವಾಬಿಗೆ ಮ್ಯಾಜಿಸ್ಟ್ರೇಟರ ಕಡೆಗೆ ಒಯ್ದುಬಿಟ್ಟರು. ಕಮಲಾಬಾಯಿ-ಮುಕರಂದರು ತಮ್ಮ ಕೈಯಲ್ಲಿ ಮುರಲೀಧರನು..........—

ವಿರಕ್ತರು (ಮಧ್ಯದಲ್ಲಿಯೇ):—ಓಹೋ! ತಿಳಿಯಿತು, ಬಿಡಿರಿ.

ಇದರಲ್ಲಿ ನಿಮ್ಮ ಕೌಶಲ್ಯವು ಒಡೆದು ಕಾಣುತ್ತದೆ; ಮತ್ತು ಕುಳಿಂದಸ್ವಾಮಿ ಯೆಂಬ ಹವಾಲದಾರರೂ ಒಳ್ಳೇ ತಂತ್ರಗಾರರಿದ್ದಂತೆ ತೋರುತ್ತದೆ

ವಕೀಲರು:—ಹವಾಲದಾರರು ಸಾಮಾನ್ಯ ತಂತ್ರಗಾರರಲ್ಲ. "ಮಾಯಾವಿ"ಇದ್ದಂತೆ ಇರುವರು. ಹಿಂದಕ್ಕಾದ ಚಾವಡಿಯ ಹತ್ತರದ ದೊಡ್ಡ ಕಳವನ್ನು ಅವ............ಅಲ್ಲ! ಅಲ್ಲ! ವಿರಕ್ತ ಮಹಾಶಯರೇ, ಪರರ ಗುಣದೋಷಗಳನ್ನೆಣಿಸುವದು ಸರಿಯಲ್ಲ. ಅದು ಹೋಗಲಿ ಬಿಡಿರಿ. ನಿನ್ನಿನ ದಿವಸ ನ್ಯಾಯನಿಷ್ಠುರರಾದ ಒಬ್ಬ ಜಜ್ಜರು ವರ್ಗವಾಗಿ ಬಂದಿರುವದು ನಿಮಗೆ ಗೊತ್ತಿದೆಯೇನು?

ವಿರಕ್ತರು(ಒಂದುಬಗೆಯ ವಿಚಿತ್ರ ನಗೆಯಿಂದ ನಕ್ಕು):—ಹೌದು; ಗೊತ್ತಿರುವದು. ವಿನಾಯಕರಾಯರೇ ಹೇಳಿದರು. ಈ ದಿನ ಬೆಂಚ ಕೋರ್ಟಿನ ಮುಂದೆ ಅವರಿಗೆ ಪಾನಸುಪಾರಿ ಇರುವದಲ್ಲವೇ? ಅಂದಮೇಲೆ ಮುರಲೀಧರನಿಗೆ ಮ್ಯಾಜಿಸ್ಟ್ರೇಟರವರು ಇಂದು ಶಿಕ್ಷೆಯನ್ನು ವಿಧಿಸಲಿಕ್ಕಿಲ್ಲ.

ವಕೀಲರು:—ಛೇ-ಛೇ, ಬಿಡುವದುಂಟೇ? ಜಜ್ಜಸಾಹೇಬರಿಗೆ ಈ ಕುಟಿಲ ತಂತ್ರದ ಸ್ವಲ್ಪ ಗಾಳಿ ಬಡಿದರಾಯಿತು. ಅವರು ತಳಸೋಸದೆ ಎಂದೂ ಬಿಡತಕ್ಕವರಲ್ಲ. ಅವರು ಐದು ಗಂಟೆಗೆ ಬರುವದರೊಳಗಾಗಿಯೇ ಮ್ಯಾಜಿಸ್ಟ್ರೇಟ ಸಾಹೇಬರಿಗೆ ಉಪದ್ರವ ಕೊಟ್ಟು ಮುರಲೀಧರನಿಗೆ ಶಿಕ್ಷೆಯನ್ನು ಕೊಡಿಸಬೇಕಾಗಿದೆ. ಕಮಲಾಬಾಯಿ-ಮಕರಂದರು, ಕಡೆಗೆ ನಿಜ ಸಂಗತಿಯನ್ನೇ ಸಾಧಿಸುತ್ತ ಬಂದಿದ್ದರೂ ಇನಸ್ಪೆಕ್ಟರರಿಗೆ ಅದು ಸುಳ್ಳು ಕಂಡದ್ದರಿಂದ ರೊಚ್ಚಿಗೆದ್ದು ಹೋಗಿರುವರು. ಮುರಲೀಧರನಿಗೆ ಶಿಕ್ಷೆಯಾಗುವದೊಂದೇ ತಡ. ಆತ್ತ ಕಮಲಾಬಾಯಿ-ಮಕರಂದರನ್ನು ದಸ್ತಗೀರು ಮಾಡಿ, ಪ್ರತಿಬಂಧದಲ್ಲಿಟ್ಟು ಬಿಡುವರು; ಎಂದು ನುಡಿದು ಮೀಸೆಯ ಮೇಲೆ ಕೈ ಹಾಕುತ್ತ ಕುಳಿತುಕೊಂಡರು; ಆದರೆ, ವಿರಕ್ತರು ಮಾತ್ರ ಚಟ್ಟನೆ ಎದ್ದು ನಿಂತು:—"ನೆಟ್ಟಗಾಯಿತು. ಇದರಿಂದ ನಿಮ್ಮ ಕೀರ್ತಿಯು ದಿಗಂತದಲ್ಲಿ ಮತ್ತಿಷ್ಟು ಹಬ್ಬುವದು." ಎಂದು ಹೇಳುತ್ತಲೇ ಅವಸರದಿಂದ ಪಾವಟಿಗೆಗಳನ್ನಿಳಿದು ಹೋಗಿ ಬಿಟ್ಟರು.

ವಿರಕ್ತರು ಒಮ್ಮಿಂದೊಮ್ಮೆ ಹೇಳದೆ-ಕೇಳದೆ ಹೋದದ್ದಕ್ಕಾಗಿ, ಮೋಹಿತೆರಾಯರು ಆಶ್ಚರ್ಯಗೊಂಡರು. ವಿನಾಯಕರಾಯರ ಖಟ್ಲೆಯು

ನಿಜ ಸಂಗತಿಯನ್ನು ಅವರ ಮುಂದೆ ಹೇಳಿದ್ದು ಉಚಿತವೋ, ಅನುಚಿತವೋ? ಎಂದು ಯೋಚಿಸುತ್ತ ಕುಳಿತರು.

• • • • •

ವಿನಾಯಕರಾಯರು ಮಹಡಿಯ ಮೇಲಿನ ಖೋಲಿಯಲ್ಲಿ ಕುಳಿಂದ ಸ್ವಾಮಿಯವರೊಂದಿಗೆ ಚಕ್ಕಂದದಿಂದ ಮಾತಾಡುತ್ತ ಕುಳಿತಿದ್ದರು. ಈ ದಿವಸ ಮುರಲೀಧರನಿಗೆ ಶಿಕ್ಷೆ ಯಾಗತಕ್ಕದ್ದಿದ್ದದರಿಂದ ಅವರಿಬ್ಬರದ ತಾವು ಪಟ್ಟ ಶ್ರಮದ ಸಾರ್ಥಕವಾಯಿತೆಂದು ಸಂತೋಷಸಾಗರದಲ್ಲಿ ಲೋಲಾಡುತ್ತಿದ್ದರು. ಈಗ ಲೋಡಿಗೆ ಆತುಕೊಂಡು, ಸಿಗರೇಟ ಸೇದುತ್ತಲಿದ್ದ ವಿನಾಯಕರಾಯರು:—ಹವಾಲದಾರ ಸಾಹೇಬರೇ, ಈ ಕಲಿಯುಗದಲ್ಲಿ ಸತ್ಯಕ್ಕೆ ಎಲ್ಲಿ ಮರ್ಯಾದೆ ಇದೆ? ಸುಳ್ಳಿನಲ್ಲಿ ಸುಖವಿದ್ದಷ್ಟು ಸತ್ಯದಲ್ಲಿ ಇಲ್ಲ. ಪುಣ್ಯ-ಪಾಪಗಳಿಗೆ ತಕ್ಕಂತೆ ದೇವರು ಫಲ-ಪ್ರಾಯಶ್ಚಿತ್ತಗಳನ್ನು ವಿಧಿಸುತ್ತಾನೆ; ಎಂದು ಹಿದರಾಡುವ ಕೆಲ ಜನರ ಮಾತಿನಲ್ಲಿ ಏನೂ ಹುರಳಿಲ್ಲ. "ನಾವು ಮಾಡಿದ ಪಾಪಕರ್ಮವನ್ನು ಜನರು ನೋಡದಿದ್ದರೂ, ದೇವರು ನೋಡುತ್ತಾನೆ'' ಎಂದು ಸತ್ಯರೀತಿಯಿಂದ ನಡೆಯುತ್ತ ಬಡತನದಲ್ಲಿ ಕೊಳೆಯುವ ಜನರು ನಿಜವಾಗಿ ಹುಚ್ಚರು. ಎಲ್ಲಿಯ ದೇವರು? ಎಲ್ಲಿಯ ಪಾಪ-ಪುಣ್ಯದ ವಿಚಾರ? ಇದೆಲ್ಲ ಸುಳ್ಳು. ನನ್ನ ಅನುಭವಕ್ಕೆ ಬಂದ ಸಂಗತಿಯ ಮೇಲಿಂದ ವಿಚಾರ ಮಾಡಿದರೆ, ಜನ್ಮದಾರಭ್ಯ ಈ ವರೆಗೆ ನಾನು ಒಂದೂ ಪುಣ್ಯದ ಕೆಲಸ ಮಾಡಿಲ್ಲ; ಆದರೂ ನನಗೆ ಸುಖವೇ ಅದೆ! ನೀವೇ ನೋಡಿರಿ. ನಾವಿಷ್ಟು ಕಪಟತಂತ್ರವನ್ನು ರಚಿಸಿ, ಅಣ್ಣ-ತಮ್ಮಂದಿರನ್ನು ಗೋಳಾಡಿಸದಿದ್ದರೆ, ಈ ಸುಂದರವಾದ ಮನೆಯೂ, ವಿಪುಲ ಸಂಪತ್ತೂ, ನನಗೆ ಎಲ್ಲಿ ದಕ್ಕುತ್ತಿದ್ದವು? ಇದರ ಮೇಲಿಂದ ನೋಡಲಾಗಿ ನನಗೆ ತಿಳಿದದ್ದೇನಂದರೆ:—ಮನುಷ್ಯನು ಸ್ವಾರ್ಥಕ್ಕಾಗಿ ಮಾಡುವ ಎಂಥ ದುಷ್ಕಾರ್ಯಗಳಾದರೂ ಅವು ಸತ್ಕಾರ್ಯಗಳೇ ಆಗುವವು.

ಕುಳಿಂದಸ್ವಾಮಿಯವರು:—ಹೌದು ನೀವನ್ನುವದು ಯಥಾಯೋಗ್ಯವು. ಮನುಷ್ಯನು ಭೂಮಿಯ ಮೇಲೆ ಹುಟ್ಟುವದೇತಕ್ಕೆ? ಕೇವಲ ಸುಖ ಪಡುವದಕ್ಕಾಗಿಯೇ ಅಲ್ಲವೇ? ಸುಖವು ಯಾತರಲ್ಲಿ? ದುಡ್ಡಿನಲ್ಲಿ. ಅಂಥ ದುಡ್ಡನ್ನು ಗಳಿಸಬೇಕೆಂಬ ಕಾಂಕ್ಷೆಯುಳ್ಳ ಮನುಷ್ಯನು, ಎಂಥ ದುಷ್ಕೃತ್ಯವನ್ನಾದರೂ ಎಗ್ಗಿಲ್ಲದೆ ಮಾಡಬೇಕು. ಪಾಪ-ಪುಣ್ಯ

ಗಳ ವಿಚಾರದಿಂದ ನಡೆಯುವ ಜನರು, ನೀವಂದಂತೆ ಕೈಸಾಗದವರೇ ಸರಿ. ದೇವರು ಇರುವನೆಂತಲೂ, ಪುಣ್ಯ-ಪಾಪಗಳಿಗೆ ಸರಿಯಾಗಿ ಫಲ ಪ್ರಾಯಶ್ಚಿತ್ತಗಳನ್ನು ಕೊಡುವನೆಂತಲೂ ಸ್ವಲ್ಪ ಹೊತ್ತು ನಂಬುವಾ; ಆದರೆ, ಮುರಲೀಧರ-ಕಮಲಾಬಾಯಿಯವರು ಜೇಲಿಗೆ ಹೋಗಬೇಕಾದರೆ, ಯಾವ ಪಾಪವನ್ನು ಮಾಡಿದ್ದರು? ಇಷ್ಟೆಲ್ಲ ಸೌಖ್ಯವನ್ನು ಭೋಗಿಸಬೇಕಾದರೆ, ನೀವೆಷ್ಟು ಪುಣ್ಯ ಮಾಡಿರುವಿರಿ? ವಿನಾಯಕರಾಯರೇ! "ಸುಳ್ಳಿಗೆ ಸುಖ, ಸತ್ಯಕ್ಕೆ ಸಾವು;" ಎಂಬ ಗಾದೆಯು ಅಕ್ಷರಶಃ ನಿಜವಾದದ್ದು; ಮತ್ತು ಈಗಿನ ಸರಕಾರವಾದರೂ ಇದಕ್ಕನುಸಾರವಾಗಿಯೇ ಇದೆ. ನಿಜ ಹೇಳಿ, ನ್ಯಾಯ ಸಂಪಾದಿಸಿಕೊಂಡು ಹೋದವನು ನೂರಕ್ಕೊಬ್ಬನಾದನೂ ಸಿಗುವನೋ, ಇಲ್ಲೋ! ನಾನೇ ಎಷ್ಟೋ ಸುಳ್ಳು ಖಟ್ಲೆಗಳಿಂದ ನೂರಾರು ಮಂದಿಗೆ ಶಿಕ್ಷೆಗಳನ್ನು ಮಾಡಿಸಿರುವೆನು; ಮತ್ತು ಅದೇ ಶಿಫಾರಸಿನ ಮೇಲೆ ನಾನು ಮೂರೇ ವರ್ಷಗಳಲ್ಲಿ ಹವಾಲದಾರನಾಗಿರುವೆನು. ನನ್ನ ಸಂಗಡ ಕೆಲಸಕ್ಕೆ ಸೇರಿದವರು ಇನ್ನೂ ನನ್ನ ಕೈಕೆಳಗೇ ಹತ್ತು ರೂಪಾಯಿಯ ಪೋಲೀಸರಾಗಿರುವರು. ಅಂದಮೇಲೆ ನೋಡಿರಿ ಹ್ಯಾಗಿದೆ, ಮೋಜು; ಎಂದು ಹುಬ್ಬು ಹಾರಿಸುತ್ತ ನುಡಿದು, ಹಿಂದೇ ಜುರಿಕೆಗೆ ಅರ್ಧ ಸಿಗರೇಟನ್ನು ಬೂದಿ ಮಾಡಿ ಬಿಟ್ಟನು.

ಈಗ ವಿನಾಯಕರಾಯರಿಗೆ ಯಾವದೋ ಹಿಂದು ವಿಷಯವು ಥಕ್ಕನೆ ನೆನಪಾಗಲು, ನೆಟ್ಟಗೆ ಕುಳಿತು:—ರಾಮಚಂದ್ರಪಂತರ ಮನೆಯಲ್ಲಾದ ಕೆಲಸದಿಂದ ಸಿಕ್ಕಜೀನಸುಗಳನ್ನು ನನಗೆ ತೋರಿಸಲೇ ಇಲ್ಲ? ಎಂದು ಉತ್ಸುಕತೆಯಿಂದ ಕೇಳಿದರು. ಅದಕ್ಕೆ ಹವಾಲದಾರರು:—ನಿಮಗೆ ಆ ಜೀನಸುಗಳು ಅಷ್ಟು ಕಿಮ್ಮತ್ತಿಗೆ ಸರಿಬರುವವೋ ಇಲ್ಲೋ ಎಂಬುದೇ ನನಗೆ ಸಂಶಯ ಬಂದದೆ; ಎಂದು ಹೇಳಿ, ಜೇಬಿನೊಳಗಿಂದ ಹಿಂದು ಸುಂದರವಾದ ಸಣ್ಣ ಪೆಟ್ಟಿಗೆಯನ್ನು ತೆಗೆದು, ವಿನಾಯಕರಾಯರ ಮುಂದಿಟ್ಟರು. ಅವರು ಅದರೊಳಗಿದ್ದ ಹಿಂದು ಮುತ್ತಿನ ಹಾರವನ್ನೂ, ತರತರದ ಬಣ್ಣದ ಹರಳು ಕೆಚ್ಚಿದ ಹದಿನೈದು ಉಂಗುರಗಳನ್ನೂ ಹೊರಗೆ ತೆಗೆದು, ಕೆಲಹೊತ್ತಿನವರೆಗೆ ಒಂದೇಸವನೆ ಪರೀಕ್ಷಿಸಿ ನೋಡಿದ ಮೇಲೆ:—ಇಷ್ಟೇ ಜೀನಸುಗಳೇನು? ಇನ್ನುಳಿದವು ಎಲ್ಲಿ ಅವೆ?

ಕುಳಿಂದಸ್ವಾಮಿಯವರು:—ಆ ಪೆಟ್ಟಿಗೆಯ ತಳದಲ್ಲಿಯೇ ಉಳಿದ

ದಾಗೀನೆಗಳನ್ನು ಮಾರಲಿಕ್ಕೆ ಕೊಟ್ಟ ಯಾದಿಯಿದೆ, ನೋಡಿಕೊಳ್ಳಿರಿ. ಈ ಮೊದಲೇ ನಮಗೂ ನಿಮಗೂ ಈಗಿನಂತೆ ವಿಶೇಷ ಸ್ನೇಹವಿದ್ದರೆ, ನಿಮ್ಮ ಮನೆಯನ್ನು ಬಂಗಾರದಿಂದ ತುಂಬಿ ಬಿಡುತ್ತಿದ್ದೆನು; ಆದರೆ, ಉಪಾಯವಿಲ್ಲ!

ವಿನಾಯಕರಾಯರು ಅರ್ಧಹಾಳಿಯಲ್ಲಿ ಬರೆಯಲ್ಪಟ್ಟ ಆ ಯಾದಿಯನ್ನು ಮನಸ್ಸಿನಲ್ಲಿಯೇ ಓದಿಕೊಂಡು ಒಂದು ದೀರ್ಘಶ್ವಾಸಗರೆದು:-ಹೋದ ದಾಗೀನೆಗಳ ಮಾತೇಕೆ? ಈಗಿದ್ದ ಇವುಗಳ ಬೆಲೆಯನ್ನೇ ಒಮ್ಮೆ ಹೇಳಿ ಬಿಡಿರಿ.

ಕುಳಿಂದಸ್ವಾಮಿಯವರು:—ನನ್ನನ್ನೇ ಕೇಳುವಿರಲ್ಲಾ? ಸತತವಾಗಿ ಮುತ್ತು-ರತ್ನಗಳನ್ನು ಪರೀಕ್ಷಿಸುವ ನಿಮಗೆ ಬೆಲೆಯು ಹೊಳೆಯುವದಿಲ್ಲೇನು?

ವಿನಾಯಕರಾಯರು:—ಹೊಳೆಯುವದು; ಆದರೂ ನಿಮ್ಮ ಮಾಲಿನ ಧಾರಣೆಯನ್ನು ನೀವೇ ಹೇಳಬೇಕಾಗುತ್ತದಷ್ಟೆ?

ಕುಳಿಂದಸ್ವಾಮಿಯವರು:—ನಾನು ಹೇಳಬೇಕೆಂದರೆ, ಇವೆಲ್ಲವುಗಳಿಗೂ ಕೂಡಿ ಐದು ಸಾವಿರ ರೂಪಾಯಿ ಆಗುವದು.

ವಿನಾಯಕರಾಯರು:—ಓಹೋ, ಇದೇನು ಹೇಳಿದಿರಿ? ಈ ಮುತ್ತಿನಹಾರದ ಕಿಮ್ಮತ್ತು ಎಷ್ಟು ಹಿಡಿದಿರಿ?

ಕುಳಿಂದಸ್ವಾಮಿಯವರು:—ಅದರ ಕಿಮ್ಮತ್ತು ನಾಲ್ಕುಸಾವಿರ ರೂಪಾಯಿ ಹಿಡಿದಿರುವೆನು. ಅದರಲ್ಲಿ ಮೂರುನೂರು ಮುತ್ತುಗಳಿದ್ದು, ಪ್ರತಿಯೊಂದರ ಬೆಲೆಯು ತೀರ ಕಡಿಮೆಯೆಂದರೆ ಹದಿನೈದು ರೂಪಾಯಿ ಆಗಲಿಕ್ಕಿಲ್ಲವೇ?

ವಿನಾಯಕರಾಯರು:—ಛೇ, ಛೇ, ಇವು ಹದಿನೈದು ರೂಪಾಯಿಯ ಮುತ್ತುಗಳಲ್ಲ. ಇದೇ ತರದ ಮುತ್ತುಗಳು ಪೇಟೆಯಲ್ಲಿ ಐದು ರೂಪಾಯಿಗೊಂದರಂತೆ ಬೇಕಾದಷ್ಟು ಸಿಗುವವು. ಕಾರಣ ಈ ಹಾರಕ್ಕೂ ಉಂಗುರಗಳಿಗೂ ಕೂಡಿ ಎರಡು ಸಾವಿರ ರೂಪಾಯಿಗಳನ್ನು ಕೊಡುತ್ತೇನೆ, ಕೊಟ್ಟು ಬಿಡಿರಿ.

ಕುಳಿಂದಸ್ವಾಮಿಯವರು:—ಸಾವುಕಾರರೇ, ೨ ಸಾವಿರ ರೂಪಾಯಿಯೆಂದರೆ ಸ್ವೈರು ಆಗುವದಿಲ್ಲವೇ? ನಾನು ಹೇಳಿದ್ದಕ್ಕೆ ೫ ನೂರು ರೂಪಾಯಿ ಕಡಿಮೆ ಕೊಡಿರಿ.

ವಿನಾಯಕರಾಯರು:—ಅದೆಲ್ಲ ಸುಳ್ಳು, ಎರಡೂವರೆಸಾವಿರ ರೂಪಾಯಿಗಳನ್ನು ರೋಖು ಕೊಡುತ್ತೇನೆ ಕೊಟ್ಟು ಬಿಡಿರಿ, ಎಂದು ಹೇಳುತ್ತ ಆ ಹಾರ-ಉಂಗುರಗಳನ್ನು ತೆಗೆದುಕೊಂಡು ಕೆಳಗೆ ಬಂದರು. ನಡುಮನೆಯಲ್ಲಿರುವ ಟ್ರೇಝುರಿಯಲ್ಲಿ ಆ ದಾಗೀನೆಗಳನ್ನಿಟ್ಟು, ಅದರೊಳಗಿಂದ ಕೆಲವು ನೋಟುಗಳನ್ನು ತೆಗೆದುಕೊಂಡು ಮೊದಲಿನಂತೆ ಬಂದು ಮಾಡಿ, ಮೇಲೆ ಹೊರಟರು. ಅಷ್ಟರಲ್ಲಿ ಒಬ್ಬ ಗೌರವರ್ಣದ ಬ್ರಾಹ್ಮಣನು ಎಡಗೈಯಲ್ಲಿ ಒಂದು ಜೋಳಿಗೆಯನ್ನೂ, ಬಲಗೈಯಲ್ಲಿ ಒಂದು ತಾಡವಾಲೆಯ ಹೊತ್ತಿಗೆಯನ್ನೂ ಹಿಡಿದುಕೊಂಡು "ಜಯ ರಘುವೀರ ಸಮರ್ಥ" ಎಂದು ಜಯಘೋಷವನ್ನು ಮಾಡುತ್ತ ಚಿರಪರಿಚಿತರಂತೆ ಒಮ್ಮೆಲೆ ಒಳಗೆ ಬಂದು, ವಿನಾಯಕರಾಯರ ಮುಂದೆ ನಿಂತುಕೊಂಡನು.

ವಿನಾಯಕರಾಯರಿಗೆ ತಡೆಯಲಾರದಷ್ಟು ಸಿಟ್ಟು ಬಂದಿತು. ಅವರು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು:—ನೀನಾರು? ಕಳ್ಳನಂತೆ ಹೇಳದೆ-ಕೇಳದೆ ಒಳಗೆ ಯಾಕೆ ಬಂದೆ? ಎಂದು ಅಧಿಕಾರಯುಕ್ತ ಸ್ವರದಿಂದ ಕೇಳಿದರು. ಅದಕ್ಕೆ ಬ್ರಾಹ್ಮಣನು ವಿನಯದಿಂದ:—ರಾಯರೇ, ಸಿಟ್ಟಾಗಬೇಡಿರಿ, ಕ್ಷಮಿಸಿರಿ. ನಾನು ಲೋಕವಿಖ್ಯಾತ ನಿಜಾನಂದ ಸ್ವಾಮಿಗಳವರ ಪಟ್ಟಶಿಷ್ಯನು. ನನಗೆ ಜ್ಯೋತಿಷವಿದ್ಯೆಯೂ, ವೈದ್ಯವಿದ್ಯೆಯೂ ಸಂಪೂರ್ಣ ಬರುತ್ತವೆ. ತಮ್ಮ ಕೀರ್ತಿಯನ್ನು ಕೇಳಿ, ತಮ್ಮಿಂದ ನಾಳಿನ ಉತ್ಸವಕ್ಕೆ ಏನಾದರೂ ಸಹಾಯವಾಗಬಹುದೆಂದು ಬಂದಿರುವೆನು, ಎಂದು ನುಡಿದು ವಿನಾಯಕರಾಯರ ಮುಖವನ್ನು ಆಶಾಜನಕ ದೃಷ್ಟಿಯಿಂದ ನೋಡುತ್ತ ನಿಂತುಕೊಂಡನು.

ವಿನಾಯಕರಾಯರಿಗೆ ದೇವ-ಬ್ರಾಹ್ಮಣರಲ್ಲಿ ಮೊದಲಿನಿಂದಲೂ ಭಕ್ತಿ ಕಡಿಮೆ. ಯಾವನಾದರೊಬ್ಬ ಬಡಬ್ರಾಹ್ಮಣನು ಭಿಕ್ಷೆಗಾಗಿ ಬಂದರೆ, ಅವನಿಗೆ ಬಾಯಿಗೆ ಬಂದಂತೆ ಬೈದು ಕಳಿಸುವದರಲ್ಲಿ ಹಿಂದೆ ಮುಂದೆ ನೋಡುತ್ತಿದ್ದಿಲ್ಲ. ಈಗ ಅವರು ತಮ್ಮ ಭವಿಷ್ಯವನ್ನು ತಿಳಿದುಕೊಳ್ಳಬೇಕಾದ್ದರಿಂದ ಆ ಬ್ರಾಹ್ಮಣನನ್ನು ಕುರಿತ ಡಾಂಭಿಕ ಆದರದಿಂದ:—ಓಹೋ! ನಿಜಾನಂದಸ್ವಾಮಿಗಳ ಶಿಷ್ಯರೆಂದರೆ, ಪರಮಹಂಸ ಜ್ಯೋತಿಷಿಗಳು ನೀವೇ ಏನು? ಇತ್ತ ಕಡೆಗೆ ಮಣೆಯ ಮೇಲೆ ಕುಳಿತುಕೊಳ್ಳಿರಿ. ತಿಳಿಯದೆ ಮಾತಾಡಿದೆನು. ನಿಮ್ಮ ಹೆಸರನ್ನೂ ನಿಮ್ಮಲ್ಲಿರುವ ಜ್ಯೋತಿಷವಿದ್ಯೆಯ

ಮಹತ್ವವನ್ನೂ ಚನ್ನಾಗಿ ಕೇಳಿರುವೆನು. ನನ್ನ ಜಾತಕವನ್ನು ನಿಮ್ಮಿಂದ ಲೇ ಬರೆಯಿಸಬೇಕೆಂದು ಬಹಳ ದಿವಸದಿಂದ ಕಾದಿರುವೆನು. ಅಕಸ್ಮಾತ್ತಾಗಿ ಬಂದು ಬಿಟ್ಟಿರಲ್ಲಾ! ಒಳ್ಳೇದಾಯಿತು. ಕೂತುಕೊಳ್ಳಿರಿ. ನಾನು ಈಗ ಬರುತ್ತೇನೆ, ಎಂದು ಹೇಳಿ, ಅಟ್ಟದ ಮೇಲೆ ಹೋದರು.

ಜ್ಯೋತಿಷಿಪರಮಹಂಸರು ಎಂದೂ ನೋಡದ ಆ ಮನೆಯ ಸೌಂದರ್ಯವನ್ನು ಒಳ್ಳೇ ಲಕ್ಷ್ಯಪೂರ್ವಕವಾಗಿ ನೋಡಹತ್ತಿದರು. ನೋಡ ನೋಡುತ್ತ ಅವರ ದೃಷ್ಟಿಗೆ ಟ್ರೇಝರಿಯ ಮುಂದೆ ಬಿದ್ದಿದ್ದ ಕುಳಿಂದ ಸ್ವಾಮಿಯವರ ದಾಗೀನೆಗಳನ್ನು ನಾರಿದ ಯಾದಿಯು ಬಿದ್ದಿತು. ಕೂಡಲೆ ಪರಮಹಂಸರು ಅದನ್ನು ತಕ್ಕೊಂಡು, ಸ್ವಲ್ಪ ಓದಿದಂತೆ ಮಾಡಿ ಯಾವ ಉದ್ದೇಶದಿಂದಲೋ ಅದನ್ನು ಜೋಳಿಗೆಯಲ್ಲಿ ಇಟ್ಟುಕೊಂಡರು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ವಿನಾಯಕರಾಯರು ಬರಲು ಅವರೊಂದಿಗೆ ಅಟ್ಟದ ಮೇಲೆ ಹೋದರು.

ವಿನಾಯಕರಾಯರು ತಾವು ಕುಳಿತುಕೊಳ್ಳುವ ಗಾದಿಯ ಮೇಲೆ ಪರಮಹಂಸರನ್ನು ಕೂಡ್ರಿಸಿ:—ಸ್ವಾಮಿಗಳೇ ಈ ದಿನ ನನ್ನದೊಂದು ಮಹತ್ಕಾರ್ಯವಾಗತಕ್ಕದ್ದದೆ. ಅದರ ಶುಭಾಶುಭ ಫಲಗಳನ್ನು ಚನ್ನಾಗಿ ಹೇಳಿರಿ, ಎನಲು, ಪರಮಹಂಸರು ಕೆಲಹೊತ್ತಿನವರೆಗೆ ವಿನಾಯಕರಾಯರ ಮುಖವನ್ನು ಸೂಕ್ಷ್ಮರೀತಿಯಿಂದ ಪರೀಕ್ಷಿಸಿ ನೋಡಿ:—ನೀವು ಏನೂ ಚಿಂತೆ ಮಾಡಬೇಡಿರಿ. ಬಯಸಿದಂತೆ ಕಾರ್ಯವು ಕೊನೆಗಾಣುವದು, ಎಂದು ಹೇಳಿ ಸುಮ್ಮನಾದರು.

ವಿನಾಯಕರಾಯರು ಅಸಮಾಧಾನದಿಂದ:—ಹೀಗೆ ಗೌಪ್ಯ ಭಾಷೆಯಿಂದ ಹೇಳಿದರೆ ನಮಗೆ ಸಮಾಧಾನವಾಗದು. ಅದರ ಸಾದ್ಯಂತ ಸಂಗತಿಯನ್ನು ಚನ್ನಾಗಿ ಹೇಳಬೇಕು.

ಇದನ್ನು ಕೇಳಿ ಪರಮಹಂಸರು ಮುಗುಳು ನಗೆ ನಗುತ್ತ:—ನಿಮಗೆ ಇಷ್ಟರಿಂದ ಸಮಾಧಾನವಾಗದಿದ್ದರೆ ಅದಕ್ಕೆ ನಾನೇನು ಮಾಡಲಿ? ಅದರ ಸಾದ್ಯಂತ ಸಂಗತಿಯನ್ನು ಹೇಳಬೇಕಾದರೆ, ಗಣಿತಹಾಕಬೇಕಾಗುವದು; ಎನ್ನಲು, ವಿನಾಯಕರಾಯರು:—ಓಹೋ ಅದಕ್ಕೇನು ಬಂದದೆ? ಗಣಿತ ಹಾಕಿಯೇ ಹೇಳಿರಿ. ಅದರ ಬಗ್ಗೆ ನಿಮಗೆ ಅಸಂತೋಷವಾಗದಂತೆ ಏನಾದರೂ ಕೊಡುತ್ತೇನೆ!

ಪರಮಹಂಸರು ಮತ್ತೆ ನಕ್ಕು:—ಅಪ್ಪಾ, ನಾನು ಹಣದ ಆಶೆಯಿಂದ ಆ ಮಾತು ಆಡಲಿಲ್ಲ. ನನ್ನ ಗುರುಗಳು "ನೀನು ಎಷ್ಟು ಮಂದಿಯ ಭವಿಷ್ಯವನ್ನು ಸಾದ್ಯಂತವಾಗಿ ಹೇಳುವಿಯೋ ಅದನ್ನು ಬಾಯಿಂದ ಹೇಳದೆ, ಲೇಖದಿಂದ ತಿಳಿಸಿ, ಅವರ ಕಡೆಯಿಂದ ಈ ಸಂಗತಿಯು ನಿಜವಿದೆ, ಎಂದು ಬರೆಸಿ ಸಹಿ ಮಾಡಿಸಿಕೊಂಡು ವರ್ಷಕ್ಕೊಮ್ಮೆ ಅವೆಲ್ಲವುಗಳನ್ನು ನನ್ನ ಕಡೆಗೆ ಒಪ್ಪಿಸಬೇಕು" ಹೀಗೆಂದು ಕಟ್ಟಪ್ಪಣೆ ಮಾಡಿರುವರು. ಕೆಲವರು ಈ ಕರಾರಿಗೆ ಒಪ್ಪಿಕೊಳ್ಳುವದಿಲ್ಲ; ಮತ್ತು ಕೆಲವರು ಮೊದಲು ಒಪ್ಪಿಕೊಂಡರೂ ಪತ್ರವು ಬರೆದು ತಯಾರಾದ ಮೇಲೆ, ಅದರೊಳಗಿನ ಕೆಲವು ರಹಸ್ಯ ಸಂಗತಿಗಳಿಗೆ ಹೆದರಿ, ಸಹಿ ಮಾಡಲಿಕ್ಕೆ ಅಂಜುತ್ತಾರೆ; ಆದರೆ ನನ್ನ ಕಡೆಗೆ ಅಂಥ ಎಷ್ಟೋ ಭವಿಷ್ಯಪತ್ರಗಳಿರುತ್ತಿದ್ದರೂ, ಅದರೊಳಗಿನ ಒಂದು ಅಕ್ಷರವನ್ನು ಕೂಡಾ ನನ್ನ ಗುರುವಿನ ಹೊರ್ತು ಅನ್ಯರ ದೃಷ್ಟಿಗೆ ಬೀಳಗೊಡುವದಿಲ್ಲ. ಇದು ಮುಖ್ಯ ಮಾತು. ನೋಡಿರಿ, ಇದಕ್ಕೆ ನೀವು ಒಪ್ಪಿಕೊಳ್ಳುವಂತಿದ್ದರೆ, ಈಗಲೇ ನಿಮ್ಮ ಇವತ್ತಿನ ಮಹತ್ಕಾರ್ಯದ ಸಾದ್ಯಂತ ಸಂಗತಿಯನ್ನು ಬರೆದು ಕೊಡುತ್ತೇನೆ, ಎಂದು ಸ್ಪಷ್ಟವಾಗಿ ಹೇಳಿದರು.

ಇದೆಲ್ಲವನ್ನು ಕೇಳಿ ವಿನಾಯಕರಾಯರು ಆಶ್ಚರ್ಯದಿಂದ:--ಇದೆಂಥ ಜ್ಯೋತಿಷ ಹೇಳುವ ಪದ್ಧತಿಯು! ಇದುವರೆಗೂ ನಾನು ಈ ಪದ್ಧತಿಯನ್ನು ಕೇಳಿದ್ದಿಲ್ಲ. ಇರಲಿ; ಆದರೂ ಚಿಂತೆಯಿಲ್ಲ. ಜ್ಯೋತಿಷಿಗಳೇ, ಭೂತ-ವರ್ತಮಾನ ಕಾಲಗಳ ಸಂಗತಿಗಳು ನಿಜವಿದ್ದರೆ, ಅದಕ್ಕೆ ಒಪ್ಪಿಕೊಂಡು ಸಹಿ ಮಾಡಬಹುದು; ಆದರೆ ತಿಳಿಯದ ಭವಿಷ್ಯದ ಸಂಗತಿಗೆ ಒಪ್ಪಿಕೊಳ್ಳುವ ಬಗೆ ಹ್ಯಾಗೆ?

ಪರಮಹಂಸರು:—ನಿಮಗೆ ಭವಿತವ್ಯಕ್ಕೆ ಒಪ್ಪಿಕೊಳ್ಳಿರೆಂದು ಅದಾರು ಹೇಳುವವರು? ಭೂತಕಾಲದ ಸಂಗತಿಗಳಿಗೇನೇ ಕುಲದೇವರನ್ನು ಸ್ಮರಿಸಿ, ಅವು ನಿಜವಿದ್ದರೆ ಒಪ್ಪಿಕೊಂಡು ಸಹಿ ಮಾಡಿರಿ. ಇದಕ್ಕೆ ಯಾವ ಬಾಧಕವದೆ?

ವಿನಾಯಕರಾಯರು:--ಹಾಗಾದರೆ, ಸಾಗಲಿ. ನಿಮ್ಮಂಥ ಲೋಕಪೂಜ್ಯರಲ್ಲಿ ಅವಿಶ್ವಾಸ ತಳೆಯುವದು ಯೋಗ್ಯವಲ್ಲ ನಿಮ್ಮ ಕರಾರಿಗೆ ನನ್ನ ಸಂಪೂರ್ಣ ಒಪ್ಪಿಗೆಯದೆ. ಬರೆಯಿರಿ. ಇವತ್ತಿನ ಮಹತ್ಕಾರ್ಯದ ಸಾದ್ಯಂತ ಸಂಗತಿಯನ್ನು ಚನ್ನಾಗಿ ಬರೆಯಿರಿ. ಅದಕ್ಕೆ ಸ್ವ

ಕೋಪದಿಂದ ಸಹಿ ಮಾಡುತ್ತೇನೆ. ಇದರಲ್ಲಿ ನಿಮ್ಮ ಪಾಂಡಿತ್ಯವೂ ತಿಳಿದು ಹೋಗಲಿ; ಎನ್ನಲು, ಪರಮಹಂಸರು ಲೇಖನಸಾಮಗ್ರಿಯನ್ನಿಸಕೊಂಡರು. ಏನೇನೋ ತಮ್ಮ ತಾಡವಾಲಿಯ ಪುಸ್ತಕದಲ್ಲಿ ನೋಡಿಕೊಳ್ಳುತ್ತಲೂ, ನಡುನಡುವೆ ವಿನಾಯಕರಾಯರ ಹಸ್ತವನ್ನು ಪರೀಕ್ಷಿಸುತ್ತಲೂ ಬರೆಯ ತೊಡಗಿದರು.

ಅರ್ಧತಾಸಿನಲ್ಲಿ ವಿನಾಯಕರಾಯರ ತ್ರಿಕಾಲದಲ್ಲಿಯ ಮಹತ್ಕಾರ್ಯದ ಜ್ಯೋತಿಷಪತ್ರವು ಬರೆದು ಸಿದ್ಧವಾಯಿತು. ಆ ಮೇಲೆ ಪರಮಹಂಸರು ತಮ್ಮ ಜೋಳಿಗೆಯಿಂದ ಒಂದು ಆಣೆಯ ಟಕೀಟನ್ನು ತೆಗೆದು ಆ ಪತ್ರದ ಕೆಳಬದಿಗೆ ಹಚ್ಚಿ ವಿನಾಯಕರಾಯರ ಕೈಯಲ್ಲಿ ಕೊಟ್ಟು:— ಇಗೋ, ತಕ್ಕೊಳ್ಳಿರಿ ನಿಮ್ಮ ಜ್ಯೋತಿಷಪತ್ರವನ್ನು! ಸಂಪೂರ್ಣ ಓದಿ, ಇದರಲ್ಲಿ ನಿಮಗೆ ನಿಜಕಂಡ ಸಂಗತಿಯ ವಾಕ್ಯಗಳ ಮೇಲೆ ಗುರ್ತು ಮಾಡಿ 'ಇಷ್ಟು ವಾಕ್ಯಗಳು ನಿಜ ಇವೆ' ಎಂದು ಬರೆದು, ಟಕೀಟನ ಮೇಲೆ ಸಹಿ ಮಾಡಿಕೊಡಿರಿ; ಎಂದು ಹೇಳಿ, ಸೂಕ್ಷ್ಮರೀತಿಯಿಂದ ಅವರ ಮುಖವನ್ನು ನೋಡುತ್ತ ಕುಳಿತುಕೊಂಡರು.

ವಿನಾಯಕರಾಯರೂ, ಹವಾಲದಾರರೂ ಕೂಡಿ ಮೊದಲಿನಿಂದ ಕೊನೆಯವರೆಗೆ ಆ ಜ್ಯೋತಿಷಪತ್ರವನ್ನು ಓದಿಕೊಂಡರು. ವಿನಾಯಕರಾಯರಂತೂ ಪರಮಾಶ್ಚರ್ಯಪಟ್ಟು, ಹವಾಲದಾರರ ಮುಖ ನೋಡಿ, ಒಂದು ಬಗೆಯ ವಿಚಿತ್ರ ನಗೆ ನಕ್ಕು, ಪರಮಹಂಸರನ್ನು ಕುರಿತು:— ಪರಮಹಂಸಸ್ವಾಮಿಗಳವರೇ, ನಿಮ್ಮ ಜ್ಯೋತಿಷವಿದ್ಯೆಯು ಅತ್ಯಗಾಧವಾದದ್ದು. ಇದರಲ್ಲಿ ಭೂತ-ವರ್ತಮಾನಕಾಲಗಳ ಸರ್ವಸಂಗತಿಗಳೂ ನಿಜವಿವೆ. ಅಂದಮೇಲೆ ಭವಿಷತ್ಕಾಲದ ಸಂಗತಿಗಳೂ ನಿಜವಿರಲಿಕ್ಕೆ ಬೇಕು. ಆದರೆ ಇದರೊಳಗಿನ ಕೆಲವು ಗುಪ್ತಸಂಗತಿಗಳು ಪರರ ದೃಷ್ಟಿಗೆ ಬಿದ್ದರೆ, ಮಹಾ ಅನರ್ಥ ಸಂಭವಿಸುವದು. ಅದಕ್ಕಾಗಿ ಸಹಿ ಮಾಡಲು, ನನಗೆ ಅಂಜಿಕೆ ಬರುತ್ತದಲ್ಲ! ಎಂದು ಗುಣುಗುಟ್ಟಿದರು. ಇದನ್ನು ಕೇಳಿ, ಪರಮಹಂಸರು ಅನಿವಾರಕೋಪಗೊಂಡು ಗಂಭೀರಸ್ವರದಿಂದ:— ನಾನು ನಿಮಗೆ ಮೊದಲೇ ಈ ಮಾತನ್ನು ತಿಳಿಸಲಿಲ್ಲವೇ? ಆಗೇನು ಮಾಡಿಕೊಂಡಿದ್ದಿರಿ? ನಾನು ದುಡ್ಡಿಗೆ ಮರುಳಾಗುವ ಅಂಥ ಇಂಥ ಜ್ಯೋತಿಷಿಯುಲ್ಲ. ತಿಳಿಯಿತೇ? ಸುಮ್ಮನೆ ಸಹಿ ಮಾಡಿರಿ. ನಾನೇನು ಈ ನಿಮ್ಮ

ಕ್ಷುಲ್ಲಕ ಗೌಪ್ಯಸಂಗತಿಯನ್ನೊಳಗೊಂಡ ಜ್ಯೋತಿಷಪತ್ರವನ್ನು ಪರರಿಗೆ ತೋರಿಸುವದಿಲ್ಲ. ಆದಕ್ಕೇಕೆ ನೀವಿಷ್ಟು ಅಂಜುವಿರಿ? ಎಂದು ಗದ್ದರಿಸಿದರು.

ವಿನಾಯಕರಾಯರು ಪರಮಹಂಸರ ಭಯಂಕರ ಮುಖಮುದ್ರೆಯನ್ನು ನೋಡಿ ನಿಜವಾಗಿಯೇ ಅಂಜಿದರು. ಅವರಿಗೆ ಎದುರುತ್ತರ ಕೊಡಲು ಧೈರ್ಯಸಾಲದೆ ಹವಾಲದಾರರ ಮುಖನೋಡುತ್ತ ಸುಮ್ಮನೆ ಆ ಜ್ಯೋತಿಷಪತ್ರದ ಕೆಳಬದಿಗೆ "ಇದರೊಳಗಿನ ಭೂತ-ವರ್ತಮಾನಕಾಲಗಳ ಎಲ್ಲ ಸಂಗತಿಗಳೂ ನಿಜವಿದ್ದು ಇದಕ್ಕೆ ನನ್ನ ಒಪ್ಪಿಗೆಯುದೆ." ಎಂದು ಸ್ಪಷ್ಟವಾಗಿ ಬರೆದು ಟಕೀಟನಮೇಲೆ ಸಹಿ ಮಾಡಿದರು. ಇದೆಲ್ಲವನ್ನು ನೋಡಿ ಕುಳಿಂದಸ್ವಾಮಿಯವರಿಗೂ ತಮ್ಮ ಭವಿಷ್ಯವನ್ನು ಅರಿತುಕೊಳ್ಳಬೇಕೆಂಬ ಜಿಜ್ಞಾಸೆಯು ಹುಟ್ಟಿತು. ಮುಂದೆ ಸ್ವಲ್ಪ ಹೊತ್ತಿನಲ್ಲಿ ಪರಮಹಂಸರು ಹವಾಲದಾರರ ಜ್ಯೋತಿಷಪತ್ರವನ್ನೂ ಬರೆದು, ಅವರಿಂದಲೂ ಸಹಿ ಮಾಡಿಸಿಕೊಂಡರು.

ಇಷ್ಟೆಲ್ಲ ಆದ ಮೇಲೆ ವಿನಾಯಕರಾಯರು ಪರಮಹಂಸರನ್ನು ಕುರಿತು:—ಜ್ಯೋತಿಷಿಗಳೇ, ಹೊತ್ತಾಯಿತು. ಈಗ ನಾವು ಬೆಂಚ ಕೋರ್ಟಿಗೆ ಹೋಗಬೇಕಾಗಿದೆ. ಅಪ್ಪಣೆಕೊಡಿರಿ. ಈ ದಿನ ಸಂಜೆಯು ಒಳಗಾಗಿ ನಿಮ್ಮ ಭವಿಷ್ಯವು ಭೂತಕಾಲದ ಸಂಗತಿಗಳಂತೆ ಸತ್ಯಕಂಡರೆ ನಿಮಗೆ ಯೋಗ್ಯ ಬಕ್ಷೀಸನ್ನು ಸಂಜೆಗೆ ಬಂದು ಕೊಡುತ್ತೇನೆ; ಎಂದು ಹೇಳಿದರು.

ಪರಮಹಂಸರು:—"ನೀವು ಸಂಜೆಗೆ ತಿರುಗಿ ಈ ಮನೆಗೆ ಬಂದರಷ್ಟೇ ನನಗೆ ಬಕ್ಷೀಸುಕೊಡುವದು!"ಎಂದು ನುಡಿದು ವಿಚಿತ್ರನಗೆಯಿಂದ ನಕ್ಕರು.

ಪರಮಹಂಸರ ಈ ಅಮಂಗಲಮಾತನ್ನು ಕೇಳಿ, ವಿನಾಯಕರಾಯರು ಗಾಬರಿಯಾಗಿ ಅವರ ಮುಖವನ್ನು ಹುಳು ಹುಳು ನೋಡುತ್ತ:—ಏನೆಂದಿರಿ? ನನಗೆ ನಿಮ್ಮ ಮಾತಿನ ಅರ್ಥವು ತಿಳಿಯಲಿಲ್ಲ; ಎಂದು ಕೇಳಲು,

ಅದಕ್ಕೆ ಪರಮಹಂಸರು ಮತ್ತಿಷ್ಟು ನಕ್ಕು:—ಸಾವುಕಾರರೇ, ನೀವು ವಿಪರೀತ ಗ್ರಹಿಸಿಕೊಂಡಿರಿ. ಸಾವಿರಾರು ಕೆಲಸಗಳಲ್ಲಿ ತೊಡಗುವ ನಿಮಗೆ ನನ್ನ ಹೊತ್ತಿಗೆ ಈ ಮನೆಗೆ ಬರಲು ಅವಕಾಶವಾಗುವದೋ ಇಲ್ಲವೋ? ಎಂಬ ಉದ್ದೇಶದಿಂದ ಹಾಗೆ ಮಾತಾಡಿದೆನು.

ವಿನಾಯಕರಾಯರು:—ಅಂದರೆ ಸಂಜೆಗೆ ನಾನು ಈ ಮನೆಗೆ ಬರು

ವದೂ, ನಿಮಗೆ ಯೋಗ್ಯವೇಳೆಗೆ ಬಕ್ಷೀಸು ಕೊಡುವದೂ ನಿಜಕಾಣದಿದ್ದರೆ ನಮ್ಮ ಸಂಗಡ ಬೆಂಚಕೋರ್ಟಗೇ ಬಂದು ಬಿಡಿರಿ. ಸಂಜೆಗೆ ನಾವೂ ನೀವೂ ಕೂಡಿಯೇ ಮನೆಗೆ ಬರೋಣವಂತೆ. ಸದ್ಯಕ್ಕೆ ಕಾರಕೂನರಿಲ್ಲದ್ದರಿಂದ ನಿಮಗೆ ಯಾವ ತರದ ಲಾಭವೂ ಆಗದು, ಎಂದು ಕಿಂಚಿತ್ ಕ್ರೋಧದಿಂದ ನುಡಿದರು.

ಇದಕ್ಕೆ ಪರಮ ಹಂಸರು:—ಯಾಕಾಗಲೊಲ್ಲದು, ನಿಮ್ಮಂತೆಯೇ ಆಗಲಿ. ನಾನು ನಾಲ್ಕು ಗಂಟೆಗೆ ಬೆಂಚಕೋರ್ಟಗೇ ಬರುತ್ತೇನೆ, ಎಂದು ಸಮಾಧಾನ ವೃತ್ತಿಯಿಂದ ನುಡಿದು, ಜಯ ರಘುವೀರ ಸಮರ್ಥ! ಎಂದು ಉಚ್ಚ ಸ್ವರದಿಂದ ಗರ್ಜಿಸಿ, ಜೋಳಿಗೆಯನ್ನು ಬಗಲಿಗೆ ಹಾಕಿಕೊಂಡು ಗಂಭೀರ ನಡಿಗೆಯಿಂದ 'ಪಟ' 'ಪಟ' ಆಟ್ಟದ ಪಾವಟಿಗೆಗಳನ್ನಿಳಿದು ಹೊರಟು ಹೋದರು.

ಮುಂದೆ ಕೆಲ ಹೊತ್ತಿನ ವರೆಗೆ ವಿನಾಯಕರಾಯ ಹವಾಲದಾರರು ಜ್ಯೋತಿಷಿ ಪರಮಹಂಸರ ವಿದ್ಯೆಯ ವಿಷಯಕ್ಕೆ ಅನೇಕ ಬಗೆಯ ತರ್ಕ ವಿತರ್ಕ ಮಾಡುತ್ತ ಕುಳಿತು, ನಂತರ ಎದ್ದು ಬೆಂಚ ಕೋರ್ಟಿನ ಹಾದಿಯನ್ನು ಹಿಡಿದರು. ಹೋಗೆ ಹೋಗುತ್ತ ಮಾರ್ಗದಲ್ಲಿ ತಾಲೂಕ ಕಚೇರಿಯು ಹತ್ತಲು, ಅಲ್ಲಿದ್ದ ಮುರಲೀಧರನಿಗೆ ಕೆಲವು ಮರ್ಮಭೇದಕ ಮಾತುಗಳನ್ನಾಡಿ ಹೋಗಬೇಕೆಂದು ಒಳಗೆ ಹೋದರು.

ಮುರಲೀಧರನ ಬೇನೆಯು ಸ್ವಲ್ಪ ಗುಣವಾಗಿದ್ದರೂ ಚಿಂತಾಗ್ನಿಯಿಂದ, ಸುಂದರವಾದ ಅವನ ದೇಹವು ಕೃಶವಾಗಿ ಕಳೆಗುಂದಿ ಹೋಗಿತ್ತು. ಆಗ ಆ ಮಾನಧನನು ದುರದೃಷ್ಟವನ್ನು ನೆನಿಸಿಕೊಂಡು, ಮೇಲಿಂದ ಮೇಲೆ ಉಸಿರ್ಗರೆಯುತ್ತ ಬಾಗಿಲಿಗೆ ಹೊಂದಿ ಮರೆಗೆ ಕುಳಿತುಕೊಂಡಿದ್ದನು. ಬಿಡುಗಡೆಯ ಆಶೆಯು ಸಂಪೂರ್ಣವಾಗಿ ಕಡಿದು ಹೋದ್ದರಿಂದ ಮುರಲೀಧರನು ತನ್ನ ಜೀವದ ಮೇಲೆ ಬಹಳ ಉದಾಸೀನನಾಗಿದ್ದನು. ಆದರೂ, ಗುರುತಿನ ಜನರಿಗೆ ಮುಖತೋರಿಸುವದೆಂದರೆ ಮಾತ್ರ ಅವನಿಗೆ ಬಹಳ ಖೇದವೆನಿಸುತ್ತಿತ್ತು. ಈಗ ಅವನು ದೂರದಿಂದಲೇ ವಿನಾಯಕರಾಯರನ್ನು ನೋಡಿ, ಕಾಣದಂತೆ ಮತ್ತಿಷ್ಟು ಹುದುಗಿಕೊಂಡು ಕುಳಿತುಕೊಂಡನು.

ಮುಂದೆ ಸ್ವಲ್ಪ ಹೊತ್ತಿನೊಳಗಾಗಿ ಹವಾಲದಾರ ಹಾಗು ವಿನಾ

ಯಕರಾಯರು ಬಂದರು. ಹವಾಲದಾರರಿಗೆ ಅಲ್ಲಿಯ ಪೋಲೀಸರ ಗುರ್ತು ಇದ್ದದರಿಂದ ಅವರು ಆತಂಕವಿಲ್ಲದೆ ಮುರಲೀಧರನಿದ್ದ ಖೋಲಿಯ ಖಿಡಿಕೆಯಲ್ಲಿ ಹಣಿಕಿ ಹಾಕಿ ಅಧೋವದನನಾಗಿ ಕುಳಿತಿದ್ದ ಮುರಲೀಧರನನ್ನು ನೋಡಿ:—ಕಳ್ಳನು ಹ್ಯಾಗೆ ಮರೆಗೆ ಬೊಗ್ಗಿಕೊಂಡು ಕುಳಿತಿರುವನು ನೋಡಿರಿ, ಎಂದು ವಿನಾಯಕರಾಯರನ್ನುದ್ದೇಶಿಸಿ ನುಡಿದರು. ವಿನಾಯಕರಾಯರೂ ಅದೇ ಖಿಡಕಿಯಲ್ಲಿ ನೋಡಿ:—ಎಲೇ ಮುರಲೀ, ಅತ್ತ ಕಡೆಗೆ ನಿನಗಾಗಿಯೇ ಹಾಸಿಟ್ಟ ಕಂಬಳಿಯ ಮೇಲೆ ಕೂಡ್ರದೆ ಇಲ್ಲೇಕೆ ಕುಳಿತಿರುವಿ? ಯಾಕೆ ನಾಚಿಕೆಯಾಗುತ್ತದೇನು? ಎಂದು ಕೇಳಿದರು. ಆದರೂ ಮುರಲೀಧರನಿಂದ ಯಾವ ಉತ್ತರವೂ ಬಾರದ್ದನ್ನು ನೋಡಿ, ಹವಾಲದಾರ ಸಾಹೇಬರು ಚಡಪಡಿಸಿ:—ಕಳ್ಳರಿಗೇತರ ನಾಚಿಕೆ? "ಬಂಧು ಬಳಗದವರನ್ನು ಅಗಲುವೆನಲ್ಲಾ?" ಎಂಬ ಚಿಂತೆಮಾತ್ರ ಆಗಿರಬಹುದು, ಎಂದು ನುಡಿದರು. ಅದಕ್ಕೆ ವಿನಾಯಕರಾಯರು:—ಬಂಧುಬಳಗದವರನ್ನೆಲ್ಲಿ ಅಗಲುವನು? ಸಂಜೆಯ ಹೊಳಗಾಗಿ ಅತ್ತಿಗೆ-ತಮ್ಮಂದಿರನ್ನು ಕೂಡಿಕೊಂಡೇ ವಿಜಾಪುರಕ್ಕೆ ಹೋಗುವನಲ್ಲಾ? ಎಂದು ಹೇಳಿದರು. ಇವರಿಷ್ಟು ಹೆದರಿಕೊಂಡರೂ ಮುರಲೀಧರನು ಹೊಂದು ತುಟಿ ಎರಡು ಮಾಡಲಿಲ್ಲ. ಮುರಲೀಧರನನ್ನು ಸಿಟ್ಟಿಗೆಬ್ಬಿಸುವದರಲ್ಲಿ ಉತ್ಸುಕತೆಯುಳ್ಳ ಹವಾಲದಾರರಂತೂ ಕಳವಳಗೊಂಡರು. ಈಗ ಸಾಹೇಬರು ಕಡೆಯ ಉಪಾಯವೆಂದು ಕೈಯೊಳಗಿನ ಬಡಿಗೆಯಿಂದ ಖಿಡಿಕಿಯ ಮಾರ್ಗವಾಗಿ ಮುರಲೀಧರನಿಗೆ ತಿವಿದು:—ಲುಚ್ಚಾ, ಮೂಕನಂತೆ ಸುಮ್ಮನೆ ಯಾಕೆ ಕುಳಿತಿರುವಿ? ಏಳು. ಮೂರು ಗಂಟೆಯಾಯಿತು. ವಿಜಾಪುರದ ಜೇಲಿಗೆ ಹೋಗಲು ತಯಾರಾಗು, ಎಂದು ಕೂಗಿಕೊಂಡರು.

ಈ ವರೆಗೆ ಸುಮ್ಮನಿದ್ದ ಮುರಲೀಧರನು ಕೆರಳಿದ ಕೇಸರಿಯಂತೆ ಹೊಮ್ಮಲೆ ಬಾಗಿಲಿಗೆ ಬಂದು:—ಯಾಕೆ? ಹವಾಲದಾರಸಾಹೇಬರೇ, ಅಲ್ಲ! ಅಲ್ಲ! ಇನ್ನು ಮೇಲೆ ಸಾಹೇಬರಲ್ಲ? ಏ ಕುಳಿಂದಾ, ನೀಚ ಕುಳಿಂದಾ, ನಾನು ವಿಜಾಪುರಕ್ಕೆ ಹೋಗಲು ಸಿದ್ಧನಾಗಿಯೇ ಇರುವೆನು. ಅದರ ಬಗ್ಗೆ ನಿನಗೇಕೆ ಇಷ್ಟು ಕಳಕಳಿಯು? ನನ್ನ ಜವಾಬನ್ನು ಕೇಳಿಲ್ಲವೇ? ನನ್ನನ್ನು ಜೇಲಿಗಾದರೂ ಹೊಯ್ಯಲಿ, ಫಾಸಿಗಾದರೂ ಹಾಕಲಿ, ಆ ಬಗ್ಗೆ ನನಗೆ ತಿಲಾಂಶವೂ ಚಿಂತೆಯಿಲ್ಲ. ನಿಮ್ಮಂಥ ಸಜ್ಜನ ದ್ರೋಹಿಗಳಿಂದ

ದೂಷಿತವಾದ ಇಲ್ಲಿಯ ಹವೆಗೆ ಹೇಸಿಕೊಂಡು ನನ್ನನ್ನು ಧಾರವಾಡದಿಂದ ಅಗಲಿಸಿದರೆ ಸಾಕು; ಇಷ್ಟಾಗಿ, ತೋಯಿಸಿಕೊಂಡವನಿಗೆ ಮಳೆಯ ಅಂಜಿಕೆ ಯೇತರದು? ಆದರೆ ಸ್ವಾರ್ಥಕ್ಕಾಗಿ, ನಿರಪರಾಧಿಗೆ ಪರಿಪರಿಯಿಂದ ದುಃಖ ಕೊಟ್ಟ ನಿಮಗೆ ದೇವರು ಇಹಲೋಕದಲ್ಲಿ ಪ್ರಾಯಶ್ಚಿತ್ತವನ್ನು ವಿಧಿಸ ದಿದ್ದರೂ, ಪರಲೋಕದಲ್ಲಿ ವಿಧಿಸಿಯೇ ವಿಧಿಸುವನು. ಅಧರ್ಮಾಧರ್ಮರ ಪ್ರಾಬಲ್ಯದಿಂದ ಈ ಜಡ ಸೃಷ್ಟಿಯಲ್ಲಿ ನಾನು ದೋಷಿಯಾದರೂ, ದೇವ ಲೋಕದಲ್ಲಿ ನಿರ್ದೋಷಿಯೇ ಸರಿ! ವಿನಾಯಕರಾಯಾ, ಇಲ್ಲಿಯ ವರೆಗೆ ಸೆರೆಮನೆಗೆ ಬಂದು, ದುಃಖವ್ಯಾಕುಲನಾದ ನನ್ನನ್ನು ನೋಡಿ, ಮರ್ಮ ಭೇದಕ ಮಾತುಗಳನ್ನಾಡಿದ್ದಕ್ಕೆ ನಿನಗೊಳ್ಳೇ ಸಂತೋಷವಾಯಿತಷ್ಟೇ? ಆಹಹಾ! ಎಂಥ ನೀಚತನವಿದು! ನಿಜವಾಗಿ ರಾಕ್ಷಸೀ ಸ್ವಭಾವವು. ಅತ್ತಿಗೆ-ತಮ್ಮಂದಿರು ಜೇಲಿಗೆ ಹೋಗುವದನ್ನು ನೋಡಿ, ಯಾವ ಮನು ಷ್ಯನಿಗೆ ದುಃಖವಾಗಲಿಕ್ಕಿಲ್ಲ? ಪಶುವು ಕೂಡಾ ಕಣ್ಣೀರು ಸುರಿಸುವದು. ಹೀಗಿರಲು, ನೀನು ಹ್ಯಾಗೆ ಆನಂದ ಪಡುವಿ? ರಾಕ್ಷಸ ಹೃದಯನೇ? ಇಷ್ಟೆಲ್ಲ ಮಾಯಾಬಲಿಯನ್ನು ಹೂಡಿ, ಯಾವ ಸೌಖ್ಯವನ್ನು ಸುರಿದು ಕೊಂಡಿ? ಈಗಿನ ಬಾಲ ಬಡಿಯುವ ನೀಚ ಜನರಿಂದ ಸೈ ಸೈ ಎನ್ನಿಸಿಕೊಂ ಡೆಯಾ? “ವಿನಾಯಕರಾಯಕರಲ್ಲವೆ, ಹಳ್ಳೇ ಸಮರ್ಥರು! ನ್ಯಾಯ ನಿಷ್ಠುರರು!! ತಮ್ಮಂದಿರನ್ನು ಕೂಡಾ ನೋಡದೆ ಜೇಲಿಗೆ ಕಳಿಸಿದರು!!!” ಎಂದು ಕೊಂಡಾಡಿಸಿಕೋ; ಆದರೆ ಅಣ್ಣಾ, ಅಲ್ಲ ಮರತೆ ಸ್ವಜನದ್ರೋ ಹಿಯೇ, ನಾನು ನಿಜವಾದ ಸಮರ್ಥನೆಂಬ ಬಗ್ಗೆ ನಿನ್ನ ಆತ್ಮವು ನಿನಗೆ ಹೇಳುವದೇನು? ತಿಳಿಗೇಡಿಯೇ! ಈ ನೀಚ ಕುಳಿಂದನಂಥ ಜನರು ಸದ್ಯಕ್ಕೆ ನಿನ್ನನ್ನು ಹೊಗಳುತ್ತಿದ್ದರೂ, ನಿನ್ನಲ್ಲಿಯೇ ಏನಾದರೂ ಸ್ವಲ್ಪ ಕೊಂಕು ಕೊರತೆಗಳುಂಟಾದಾಗ್ಗೆ ತಿರುಗಿ ನಿನ್ನನ್ನೇ ನಿಂದಿಸುವರು. ಲಂಚಪ್ರಿಯಂದರೆ ಕಳ್ಳನ ಕಡೆಯಿಂದ ಕಡಬು ತಿಂದು, ದಿನಾಲು ರೊಟ್ಟೆಯನ್ನುಹಾಕುವ ಒಡೆ ಯನ ಮೇಲೆ ತಿರುಗಿ ಬೀಳುವ ನಾಯಿಯ ಜಾತಿಯವರು. ತಿಳಿಯಿತೇ? ಎಂದು ಅಸ್ಖಲಿತ ವಾಣಿಯಿಂದ ಹೇಳುತ್ತಿರುವಷ್ಟರಲ್ಲಿ ಇಬ್ಬರು ಪೋಲೀಸರು ಮುರಲೀಧರನನ್ನು ಬೆಂಚಕೋರ್ಟಿಗೆ ಕರೆದುಕೊಂಡು ಹೋದರು.

ವಿನಾಯಕರಾವ ಹಾಗು ಹವಾಲದಾರರು ಬೇಡಿಗಳು ಕಾಣದಂತೆ ಮುಚ್ಚಿಕೊಂಡು ಹೋಗುವ ಮುರಲಿಯನ್ನು ನೋಡಿ, ನಗುತ್ತ ಅವನ ಬೆನ್ನ ಹಿಂದೆಯೇ ನಡೆದರು.

---

## ಎಂಟನೆಯ ಪರಿಚ್ಛೇದ.

ಪೋಲೀಸರು ಮುರಲೀಧರನನ್ನು ಕರೆದುಕೊಂಡು ಬರುವದರೊಳಗಾಗಿ ಬೆಂಚಕೋರ್ಟು ಪ್ರಾರಂಭವಾಗಿತ್ತು. ಈ ಜಿಲ್ಲೆಯ ಜಜ್ಜಸಾಹೇಬರು ಕುಷ್ಟರೋಗದಿಂದ ಮರಣ ಹೊಂದಿದ್ದರು. ಅವರ ಸ್ಥಳಕ್ಕೆ ಹೊಸದಾಗಿ ಬರತಕ್ಕ ಜಜ್ಜಸಾಹೇಬರ ಸ್ವಾಗತಕ್ಕಾಗಿ ಈ ದಿನ ಬೆಂಚಕೋರ್ಟಿನ ಮುಂದೆಯೇ ಸಭೆಗೂಡುವದಿತ್ತು. ವಿಸ್ತಾರವಾದ ಬೈಲಲ್ಲಿ ದೊಡ್ಡದೊಂದು ತಂಬೂ ಹೊಡೆದು, ಅದರಲ್ಲಿ ಬಾಕು, ಮೇಜು, ಖುರ್ಚಿ ಮುಂತಾದ ಎಷ್ಟೋ ಆಸನಗಳನ್ನು ಓರಣದಿಂದ ಇಡಿಸಿದ್ದಲ್ಲದೆ, ಹೂಮಾಲೆ ತೋರಣಗಳಿಂದ ಅದನ್ನು ಮನೋಹರವಾಗಿ ಅಲಂಕರಿಸಿದ್ದರು. ವಕೀಲರನ್ನು ಮೊದಲು ಮಾಡಿಕೊಂಡು ಧಾರವಾಡದ ಎಲ್ಲ ನೌಕರದಾರರೂ, ಶೇಟ-ಸಾವುಕಾರರೂ ಆ ಸಭೆಯಲ್ಲಿ ಕೂಡಿದ್ದರು. ನಡುವೆ ಹಾಸಿದ ರತ್ನಗಂಬಳಿಯ ಮೇಲೆ ನೃತ್ಯಕ್ಕಾಗಿ ಬಂದಿದ್ದ ಮನಮೋಹಿನಿಯರಾದ ವಾರ-ನಾರಿಯರು ಕುಳಿತಿದ್ದು, ಸ್ವಾಗತಮಂಡಲಿಯವರ ಚಿತ್ತವನ್ನೆಲ್ಲ ಚಂಚಲಗೊಳಿಸುತ್ತಿದ್ದರು.

ಇತ್ತ ಬೆಂಚಕೋರ್ಟಿನೊಳಗೆ ಮ್ಯಾಜಿಸ್ಟ್ರೇಟ ಸಾಹೇಬರು ಜಜ್ಜಮೆಂಟ ಬರೆಯತೊಡಗಿದ್ದರು. ಎದುರಿಗೆ ಕಂಟಾಂಜನದಲ್ಲಿ ಮುರಲೀಧರನು ಪೋಲೀಸ ಪಹರೆಯೊಳಗೆ ನಿಂತುಕೊಂಡಿದ್ದನು. ಆಗ ಅವನ ನಿಸ್ತೇಜನೇತ್ರಗಳೊಳಗಿಂದ ಅಶ್ರುಗಳು ಧಾರೆಗಟ್ಟಿ ಸುರಿಯುತ್ತಿದ್ದರೂ ಒಂದು ಬಗೆಯ ದೈದೀಪ್ಯಮಾನವಾದ ದಿವ್ಯತೇಜವು ಅವನ ಮುಖದಲ್ಲಿ ಒಪ್ಪುತ್ತಿತ್ತು. ರಂಗರಾಯರು ಬರಬೇಡಿರೆಂದು ಹೇಳಿದರೂ ಕೇಳದೆ, ಜುಲುಮೆಯಿಂದ ಮುರಲೀಧರನನ್ನು ನೋಡಲಿಕ್ಕೆ ಬಂದಿದ್ದ ಸೀತಮ್ಮ-ಕಮಲಾಬಾಯಿಯರನ್ನು ಕಿಡಿಕಿಗೆ ಹೊಂದಿ ನಿಲ್ಲಿಸಿಕೊಂಡು ನಿಂತಿದ್ದರು. ಇವರೆಲ್ಲರ ಮುಖದಲ್ಲಿ ಪ್ರೇತಕಳೆಯು ಸುರಿಯುತ್ತಿತ್ತೆಂದು ಹೇಳಬೇಕಾಗಿಲ್ಲ. ಪ್ರೇಕ್ಷಕರೆಲ್ಲರೂ ಉತ್ಸುಕತೆಯಿಂದ ಮ್ಯಾಜಿಸ್ಟ್ರೇಟರ ಮುಖವನ್ನು ನೋಡುತ್ತಿರಲು, ಮ್ಯಾಜಿಸ್ಟ್ರೇಟಸಾಹೇಬರು ಮುರಲೀಧರನನ್ನುದ್ದೇ

ಶಿಸಿ:—“ನಿನಗೆ ಎರಡು ವರ್ಷ ಸಕ್ತಮಜೂರಿಯ ಶಿಕ್ಷೆಯನ್ನು ವಿಧಿಸಿದೆ” ಎಂದು ಗಂಭೀರ ಸ್ವರದಿಂದ ನುಡಿದ ವಾಕ್ಯವು ಹವಾಲದಾರ-ವಿನಾಯಕ ರಾಯರ ಹೊರತು ಎಲ್ಲರ ಕರ್ಣಗಳಲ್ಲಿ ಕಾಸಿದ ಕುಳವನ್ನಿರಿಸಿದಂತಾಯಿತು. ಮುರಲೀಧರನ ಮರ್ಮಸ್ಥಾನಕ್ಕಂತೂ ಈ ಕಠಿಣ ವಾಕ್ಯವು, ಎಷ್ಟು ಕ್ರೂರತನದಿಂದ ಆಘಾತ ಮಾಡಿತೋ ಏನೋ? ಅವನು ಕಿಟಕಿಗೆ ಹೊಂದಿ ನಿಂತಿದ್ದ ತಾಯಿಯನ್ನು ನೋಡುತ್ತ ಕೈಮುಗಿದು:—ಅವ್ವಾ, ನಿನ್ನ ಮಗನು ಈಗ ಜೇಲಿಗೆ ಹೋಗುವದಿಲ್ಲ; ಸ್ವರ್ಗಕ್ಕೆ........ಎಂದು ಹೇಳು ವಷ್ಟರಲ್ಲಿ ಒಮ್ಮೆಲೆ ಮೂರ್ಛೆ ಬಂದು ಬಿದ್ದುಬಿಟ್ಟನು! ಇದನ್ನು ನೋಡಿ ಎಲ್ಲರ ಅಂತಃಕರಣಗಳೂ ತಳಮಳಿಸಿದವು! ಹೊರಗೆ ನಿಂತುಕೊಂಡಿದ್ದ ರಂಗರಾಯರು ಕೂಡಲೆ ಒಳಗೆ ಬಂದು, ಮುರಲೀಧರನನ್ನು ಎತ್ತಿ ತೊಡೆಯ ಮೇಲೆ ಇಟ್ಟುಕೊಂಡು ಗಾಳಿಬಿಸಹತ್ತಿದರು. ಕಮಲಾಬಾ ಯಿಯು ಮುರಲೀಧರನ ಹೃದಯದ್ರಾವಕಸ್ಥಿತಿಯನ್ನು ನೋಡಿ ಸಂತಾಪ ಗೊಂಡು ರಂಗರಾಯರ ಹತ್ತರ ಬಂದು ನಿಂತುಕೊಂಡಳು. ಅಷ್ಟರಲ್ಲಿ ಮೋಟಾರಿನ ಕರ್ಣಕಠೋರವಾದ ‘ಕಿರ್ರಿ’ಂಬ ಸಪ್ಪಳವು ಕೇಳಬಂದಿತು. ಕೂಡಲೆ ಮ್ಯಾಜಿಸ್ಟ್ರೇಟಸಾಹೇಬರು ಅವಸರದಿಂದ ಮುರಲೀಧರನನ್ನು ಸೆರೆಮನೆಗೆ ಒಯ್ಯ ಹೇಳಿ, ತಾವು ಸ್ವಾಗತಸಭೆಯಲ್ಲಿ ಬಂದು ಕುಳಿತರು.

ಜಜ್ಜಸಾಹೇಬರು ಮೋಟಾರಿನಿಂದಿಳಿದು, ಸಭಾಪ್ರವೇಶ ಮಾಡಿ ದರು; ಅವರೊಂದಿಗೆ ಅತಿವೃದ್ಧ ಯುರೋಪಿಯನ್‌ದಂಪತಿಗಳೂ ಇದ್ದರು. ಜಜ್ಜಸಾಹೇಬರೂ ಯುರೋಪಿಯನ್‌ಪೋಷಾಕಿನಿಂದ ಅಲಂಕೃತರಾಗಿದ್ದ ರಿಂದ ಅವರೂ ಯುರೋಪಿಯನ್ನರೇ ಆಗಿಹೋಗಿದ್ದರು. ಈಗ ಮ್ಯಾಜಿ ಸ್ಟ್ರೇಟರನ್ನು ಮೊದಲು ಮಾಡಿಕೊಂಡು ಎಲ್ಲರೂ ಜಜ್ಜಸಾಹೇಬರನ್ನು ವಿನಯದಿಂದ ಸತ್ಕರಿಸಿ, ಶೃಂಗರಿಸಿದ ಖುರ್ಚಿಯಲ್ಲಿ ಕೂಡ್ರಲಿಕ್ಕೆ ವಿನಂತಿ ಮಾಡಿಕೊಂಡರು; ಆದರೆ ಜಜ್ಜಸಾಹೇಬರು ಆ ಯುರೋಪಿಯನ್‌ದಂಪತಿ ಗಳನ್ನು ಉಚ್ಚಾಸನದಲ್ಲಿ ಕೂಡ್ರಿಸಿ, ತಾವು ಮತ್ತೊಂದು ಖುರ್ಚಿಯ ಮೇಲೆ ಕುಳಿತು ಮ್ಯಾಜಿಸ್ಟ್ರೇಟ ಸಾಹೇಬರನ್ನು ಕುರಿತು:—ವಿನಾಯಕ ರಾವ ಕುಲಕರ್ಣಿಯವರ ಖಟ್ಲೆಯು ಮುಗಿಯಿತೇನು? ಎಂದು ಸ್ವಚ್ಛವಾದ ಕನ್ನಡದಲ್ಲಿ ಕೇಳಿದರು.

ಮ್ಯಾಜಿಸ್ಟ್ರೇಟ ಸಾಹೇಬರು ಗಾಬರಿಯಾದರು. ಅವರು ಜಜ್ಜ

ಸಾಹೇಬರು ಹಿಮ್ಮೆಲಿ ಈ ಖಟ್ಲೆಯ ಸಂಗತಿಯನ್ನು ಕೇಳಲಿಕ್ಕೆ ಕಾರಣ ವೇನು? ಎಂದು ಯೋಚಿಸುತ್ತ:—ಮುಗಿಯಿತು; ಇದೇ ಈಗ ಆರೋಪಿಗೆ ಎರಡುವರ್ಷಗಳ ಸಶ್ರಮಶಿಕ್ಷೆಯನ್ನು ವಿಧಿಸಿದ್ದಾಯಿತು, ಎಂದು ಅತ್ಯಂತ ನಮ್ರತೆಯಿಂದ ಉತ್ತರವಿತ್ತರು.

ಜಜ್ಜಸಾಹೇಬರು ಸ್ವಲ್ಪ ಹೊತ್ತಿನವರೆಗೆ ಏನೋ ಯೋಚಿಸಿ, ಆ ಮೇಲೆ:—ಫಿರ್ಯಾದಿ-ಆರೋಪಿಯರನ್ನೂ ಮತ್ತು ಗುಪ್ತ ತಪಾಸ ಮಾಡಿದ ಅಮಲದಾರರನ್ನೂ ಕರೆಯಿಸಿರಿ; ಎಂದು ಹೇಳಿ, ಯುರೋಪಿಯನ್ ದಂಪತಿಗಳೊಂದಿಗೆ ಇಂಗ್ಲಿಷಿನಲ್ಲಿ ಏನೇನೋ ಮಾತಾಡಹತ್ತಿದರು.

ಈಗಂತೂ ಮ್ಯಾಜಿಸ್ಟ್ರೇಟ-ಪಂಚರೆಲ್ಲರೂ ಮುಂದುಗಾಣದಾದರು. ಜಜ್ಜ ಸಾಹೇಬರು ಆರೋಪಿ-ಫಿರ್ಯಾದಿಯರನ್ನು ಕರೆಸುವದರ ಕಾರಣವು ಯಾರಿಗೂ ತಿಳಿಯಲೊಲ್ಲದು. ಕೇಳಬೇಕೆಂದರೆ ಧೈರ್ಯ ಸಾಲಲೊಲ್ಲದು! ಹೀಗಾಗಿ ಅವರು ಗಡಿಬಿಡಿಯಿಂದ ಒಬ್ಬರಹಿಂದೆ ಒಬ್ಬರಂತೆ ಇಬ್ಬರು ಪೋಲೀಸರನ್ನು ಮುರಲಿಯನ್ನು ಕರೆತರುವದಕ್ಕಾಗಿ ಓಡಿಸಿದರು. ಮುಂದೆ ಸ್ವಲ್ಪ ಹೊತ್ತಿನಲ್ಲಿ ಮುರಲೀಧರ-ವಿನಾಯಕರಾಯ-ಕುಳಿಂದಸ್ವಾಮಿ ಇವರು ಜಜ್ಜ ಸಾಹೇಬರ ಮುಂದೆ ನಿಲ್ಲಿಸಲ್ಪಟ್ಟರು.

ಆಗ ಜಜ್ಜ ಸಾಹೇಬರು ವಿನಾಯಕರಾಯರನ್ನು ತೀಕ್ಷ್ಣದೃಷ್ಟಿಯಿಂದ ನೋಡುತ್ತ:—ಸಾವುಕಾರರೇ ಕಳವು ಆದದ್ದು ನಿಮ್ಮ ಮನೆಯಲ್ಲಿಯೇ ಏನು?

ವಿನಾಯಕರಾಯರು:—ಹೌದು, ರಾವಸಾಹೇಬ, ನನ್ನ ಮನೆಯಲ್ಲಯೇ.

ಜಜ್ಜರು:—ಕಳವು ಮಾಡಿದವನು ನಿಮ್ಮ ಒಡಹುಟ್ಟಿದ ತಮ್ಮನಲ್ಲವೇ?

ವಿನಾಯಕರಾಯರು:-ಹೌದು ಒಡಹುಟ್ಟಿದ ಇಬ್ಬರು ತಮ್ಮಂದಿರೂ ಅತ್ತಿಗೆಯೂ ಕೂಡಿ ಕಳವು ಮಾಡಿರುವರು.

ಜಜ್ಜರು ಆಶ್ಚರ್ಯಯುಕ್ತ ಮುದ್ರೆಯಿಂದ:—ಏನು! ಮೂವರು ಕೂಡಿ ಕಳವುಮಾಡಿರುವರೇ? ಎಂಥ ಬಂಧುಗಳಿವರು? ಇರಲಿ. ಇವರೇ ಕಳವು ಮಾಡಿರುವರೆಂದು ನೀವು ಮೊದಲು ಹ್ಯಾಗೆ ತರ್ಕಿಸಿದಿರಿ?

ವಿನಾಯಕರಾಯರು:—ಧನರ್ಮಾವತಾರರೇ, ಮೊದಲಿನಿಂದಲೂ

ತಮ್ಮಂದಿರ ದುರ್ಗುಣಗಳು ನಮಗೆ ಗೊತ್ತಿದ್ದದರಿಂದಲೂ ಮತ್ತು ಮುರಲೀಧರನೆಂಬ ತಮ್ಮನು ಕಳವು ಮಾಡಿಕೊಂಡು ಓಡಿಹೋಗುವದನ್ನು ನೋಡಿದ ಇಬ್ಬರ ಹೇಳಿಕೆಯಿಂದಲೂ ಇವರೇ ಕಳವು ಮಾಡಿರುವರೆಂದು ತರ್ಕಿಸಿದೆವು.

ಜಜ್ಜರು ತಲೆಯನ್ನಲ್ಲಾಡಿಸುತ್ತ:—ಹೀಗೇನು? ಇರಲಿ. ವಿನಾಯಕರಾಯರೇ, ತಮ್ಮಂದಿರ ದುರ್ಗುಣಗಳು ನಿಮಗೆ ಮೊದಲೇ ಹೇಗೆ ಅನುಭವಕ್ಕೆ ಬಂದಿದ್ದವು? ಅವನ್ನಿಷ್ಟು ಹೇಳಿರಿ.

ವಿನಾಯಕರಾಯರು:—ಮನೆಯಿಂದ ಬೇರೆಯಾಗುವ ಕಾಲಕ್ಕೆ ಇದ್ದ ದುಡ್ಡನ್ನೆಲ್ಲ ಅಪಹರಿಸಿಕೊಂಡು ಹೋಗಿದ್ದರು; ಮತ್ತು ಗದಗಿನ ಹಿಬ್ಬ ವ್ಯಾಪಾರಸ್ಥನು ಕಳಿಸಿದ ಸಾವಿರ ರೂಪಾಯಿಗಳನ್ನು ಎತ್ತಿ ಹಾಕಿದ್ದರು. ಇದಲ್ಲದೆ ಇನ್ನೂ ಅನೇಕ ದುಷ್ಕರ್ಮಗಳನ್ನು ಇವರು ಮಾಡಿರುವರು. ಇವೆಲ್ಲವುಗಳನ್ನು ಹೇಳಲಿಕ್ಕೆ ನಮಗೆ ಮರ್ಯಾದೆ ಸಾಲದು.

ಜಜ್ಜರು:—ಸಾಕು-ಸಾಕು. ಎರಡೇ ಉದಾಹರಣೆಗಳಿಂದ ನಮಗೆ ಮನವರಿಕೆಯಾಯಿತು. ಇಷ್ಟು ದುಷ್ಟನಾದ ಆರೋಪಿಗೆ ಈಗ ವಿಧಿಸಿದ ಎರಡು ವರ್ಷಗಳ ಶಿಕ್ಷೆಯು ಕಡಿಮೆಯಾಯಿತಲ್ಲವೇ? ಎಂದು ಕೇಳಿ, ಸೂಕ್ಷ್ಮರೀತಿಯಿಂದ ಅವರ ಮುಖವನ್ನು ನಿರೀಕ್ಷಿಸತೊಡಗಿದರು.

ವಿನಾಯಕರಾಯರು ಹಿಗ್ಗಿದರು. ಜಜ್ಜಸಾಹೇಬರು ಮುರಲೀಧರನಿಗೆ ಹೆಚ್ಚಿಗೆ ಶಿಕ್ಷೆಯನ್ನು ವಿಧಿಸುವರೆಂದು ಅವರು ನಂಬಿದರು; ಆದರೆ ಭವಿತವ್ಯವು ಆ ಮದಾಂಧರಿಗೆ ಹ್ಯಾಗೆ ತಿಳಿಯಬೇಕು? ಈಗ ಅವರು ಉಬ್ಬುಬ್ಬಿ:—ಹೌದು ರಾವಸಾಹೇಬ, ಮುರಲೀಧರನು ಬಹು ಘಾತಕಿಯಿರುವನು. ಮ್ಯಾಜಿಸ್ಟ್ರೇಟ ಸಾಹೇಬರು, ದಯೆದೋರಿ ಎರಡು ವರ್ಷಗಳ ಶಿಕ್ಷೆಯನ್ನಷ್ಟೇ ವಿಧಿಸಿರುವರಲ್ಲದೆ, ಇದಕ್ಕೂ ಹೆಚ್ಚಿನ ಶಿಕ್ಷೆಗೆ ಅವನು ಪಾತ್ರನಿರುತ್ತಾನೆ.

ಜಜ್ಜರು(ತಲೆಯನ್ನಲ್ಲಾಡಿಸಿ):—ಹೌದು, ನಿಜ ಹೇಳಿದಿರಿ, ಎಂದು ವಿಚಿತ್ರವಾದ ಸ್ವರದಿಂದ ನುಡಿದು, ಕುಳಿಂದಸ್ವಾಮಿಯವರ ಕಡೆಗೆ ತಿರುಗಿದರು.

ನಾಚು-ರಂಗುಗಳನ್ನು ನೋಡಬೇಕೆಂಬ ಕುತೂಹಲದಿಂದ ಬಂದ ಕೆಲ ಪ್ರೇಕ್ಷಕ ಜನರು ಬೇಸರಗೊಂಡು ಹೋದರು. ವಾರಾಂಗನೆಯ

ರಂತೂ ಸಾರಂಗವನ್ನು ಬದಿಗಿಟ್ಟು, ಸಾಯಂಕಾಲದ ತಮ್ಮ ನಿತ್ಯದ ವ್ಯವಸಾಯಕ್ಕೆಲ್ಲಿ ವಿಘ್ನ ಬರುವದೋ ಎಂಬ ಚಿಂತೆಯಲ್ಲಿ ಮಗ್ನರಾಗಿ ಹೋಗಿದ್ದರು. ಮ್ಯಾಜಿಸ್ಟ್ರೇಟಸಾಹೇಬರು ಈ ಖಟ್ಲೆಯ ನ್ಯಾಯ ವಿಚಾರಣೆಯಲ್ಲಿ "ತಮ್ಮಿಂದೇನಾದರೂ ತಪ್ಪಾಗಿರುವದೋ?" ಎಂದು ಯೋಚಿಸ ತೊಡಗಿದರು. ಇರಲಿ. ಈಗ ಜಜ್ಜಸಾಹೇಬರು ಕುಳಿಂದಸ್ವಾಮಿಯುವರನ್ನು ಸೂಕ್ಷ್ಮ ದೃಷ್ಟಿಯಿಂದ ಪರೀಕ್ಷಿಸಿ ನೋಡುತ್ತ:—ಈ ಮಹತ್ವದ ಗುಹ್ನೆಯನ್ನು ಪತ್ತೆ ಮಾಡಿದವರು ನೀವೇ ಏನು?

ಕುಳಿಂದಸ್ವಾಮಿಯುವರು:—ಹೌದು ರಾವಸಾಹೇಬ, ನಾನೇ.

ಜಜ್ಜರು:—ಇದರಲ್ಲಿ ನಿಮ್ಮ ಪತ್ತೇದಾರಿಯು ಹೊಗಳತಕ್ಕಂಥಾದ್ದು. ಈ ಮಹತ್ಕಾರ್ಯಕ್ಕಾಗಿ ನಿಮಗೆ ಯೋಗ್ಯ ಬಕ್ಷೀಸು ದೊರೆಯಲೇ ಬೇಕು. ಇರಲಿ. ಹವಾಲದಾರರೇ, ನೀವಿಷ್ಟು ಸಮರ್ಥರಿದ್ದು ನಿಮ್ಮ ಚಾವಡಿಯ ಹತ್ತರವೇ ಆದ ರಾಮಚಂದ್ರಪಂತರ ಮನೆಯ ಕಳವನ್ನು ಯಾಕೆ ಪತ್ತೆ ಮಾಡಲಿಲ್ಲ? ಊರಲ್ಲೆಲ್ಲ ಪೋಲೀಸರ ಮಸಲತ್ತಿನಿಂದಲೇ ಈ ಕಳವು ಆಗಿದೆಯೆಂದು ಬೊಬ್ಬಾಟವಿರುವದಲ್ಲ! ಎಂದು ನುಡಿದು, ಒಳ್ಳೇ ಭೇದಕದೃಷ್ಟಿಯಿಂದ ಹವಾಲದಾರರ ಮುಖವನ್ನು ನೋಡಹತ್ತಿದರು.

ಆದಕ್ಕೆ ಹವಾಲದಾರರು:—ರಾವಸಾಹೇಬ, ಆ ದೊಡ್ಡ ಕಳವನ್ನು ಯಾರು ಮಾಡಿರುವರೋ ಏನೋ? ಇಂಥವರೇ, ಎಂದು ತರ್ಕಿಸಲಿಕ್ಕೆ ಬರುವಂತಿಲ್ಲ; ಅಂದ ಮೇಲೆ, ಯಾವ ಸಮರ್ಥರೇನು ಮಾಡುವದು? ತಮ್ಮ ಮಾಲು ಸಿಗದ್ದಕ್ಕಾಗಿ ಪಂತರು ಸಂತಾಪದಿಂದ "ಪೋಲೀಸರು ಮನಃಪೂರ್ವಕ ಪ್ರಯತ್ನ ಮಾಡಲಿಲ್ಲ. ಅವರೇ ಕಳವು ಮಾಡಿಸಿರುವರು" ಎಂದು ದುಡ್ಡು ಕಳಕೊಂಡ ಕಿಚ್ಚಿಗಾಗಿ ಜನರ ಮುಂದೆ ಒದರಾಡುತ್ತಾರಲ್ಲದೆ, ಅದರಲ್ಲೇನೂ ಹುರುಳಿಲ್ಲ.

ಜಜ್ಜರು:—ಇದ್ದರೂ ಇರಬಹುದು; ಎಂದು ನುಡಿದು, ಕೈ ಕಟ್ಟಿಕೊಂಡು ಅಧೋವದನನಾಗಿ ನಿಂತಿದ್ದ ಮುರಲೀಧರನನ್ನು ಕುರಿತು ಪ್ರೇಮಲ ಸ್ವರದಿಂದ:-"ತಮ್ಮಾ, ಒಡಹುಟ್ಟಿದ ಅಣ್ಣನ ಮನೆಯಲ್ಲಿ ಕಳವು ಮಾಡಲಿಕ್ಕೆ ನಿನಗೆ ಬುದ್ಧಿ ಇದ್ದಿಲ್ಲವೇ? ಈ ನ್ಯಾಯ ಸರಕಾರದಲ್ಲಿ ಪಾಪಕ್ಕೆ ಪ್ರಾಯಶ್ಚಿತ್ತವು ತಪ್ಪದೆ ಆಗುವದೆಂಬದು ನಿನಗೆ ಯಾಕೆ ತಿಳಿಯಲಿಲ್ಲ?

ಮುರಲೀಧರನು(ನಿರಾಶಾಜನಕ ಸ್ವರದಿಂದ):—ಧರ್ಮಾವತಾರರೇ, ಬಹಳ ಮಾತಿಗಾಗಿ ನನ್ನನ್ನು ಕ್ಷಮಿಸಬೇಕು. ನಾನು ಕಳವು ಮಾಡಿದ್ದೂ ಮಾಡದಿದ್ದದ್ದೂ ದೇವರಿಗೇ ಗೊತ್ತು. ಅದೆಲ್ಲ ಸಂಗತಿಯನ್ನು ತಮ್ಮ ಮುಂದೆ ಮನೋರಂಜಕವಾಗುವಂತೆ ಹೇಳಿ, ಯಾವ ಸೌಖ್ಯವನ್ನೂ ಸುರಿದುಕೊಳ್ಳುವ ಆಶೆಯು ನನಗಿಲ್ಲ. ಪೋಲೀಸ ಖಾತೆಯು ಪತ್ತೇದಾರಿಯ ವಿದ್ಯೆಯನ್ನೇ ಕಲಿತಿಲ್ಲ. ಹುಂಬತನದಿಂದ ಮನಬಂದಂತೆ ಹೊಡೆದು-ಬಡಿದು ನಿರಪರಾಧಿಗಳನ್ನೂ ಸಹ ಅಪರಾಧಿತ್ವಕ್ಕೆ ಕಬೂಲ ಮಾಡಿಸುವ ಮನೆಮುರಕತನವನ್ನು ಮಾತ್ರ ಕಲಿತಿದೆ. ಈ ಪೋಲೀಸ ಖಾತೆಯು ಇಲ್ಲಿಯವರೆಗೆ ನೂರಕ್ಕೆಷ್ಟರಂತೆ ನಿಜವಾದ ಅಪರಾಧಿಗಳನ್ನು ನ್ಯಾಯಾಸ್ಥಾನಕ್ಕೆ ಕಳಿಸಿರುವದೋ, ಆ ಪರಮಾತ್ಮನೇ ಬಲ್ಲನು. ಈಗಿನ ನ್ಯಾಯನಿರ್ಣಯ ಪದ್ಧತಿಯಾದರೂ ಪೋಲೀಸರಿಗೆ ಅನುಕೂಲವಾಗಿಯೇ ಇದೆ. ಅವರು ಎಂಥವಾದರೂ ಎರಡು ಸಾಕ್ಷಿಗಳನ್ನು ಕೊಟ್ಟರಾಯಿತು; ನ್ಯಾಯದೇವತೆಯು ಶಿಷ್ಟಾಚಾರದಂತೆ ಹೆಸರಿಗೆ ಆ ಖಟ್ಲೆಯ ಚೌಕಶಿ ಮಾಡಿ, ಪೋಲೀಸರ ಕಿರ್ತಿಯನ್ನು ತಪ್ಪದೆ ತೀಡುವಳು. ಅದರಲ್ಲಿ ವಕೀಲರು ಕೈ ಹಾಕಿದರಂತೂ ಕೆಲಸವು ಮುಗಿಯಿತು! ಅರ್ಥಕ್ಕೆ ಅನರ್ಥ ಮಾಡಿ, ಅದರೊಳಗಿನ ಯಾವನಿಗಾದರೊಬ್ಬ ನಿರಪರಾಧಿಗೆ ಶಾಸನವನ್ನು ಕೊಡಿಸಿದರೆಂದೇ ತಿಳಿಯತಕ್ಕದ್ದು! ನಿಜ ಸಂಗತಿಯನ್ನು ಸುಳ್ಳು ಮಾಡುವದರಲ್ಲಿಯೂ, ಸುಳ್ಳು ಸಂಗತಿಯನ್ನು ನಿಜ ಮಾಡುವದರಲ್ಲಿಯೂ, ನಿಷ್ಣಾತರಾದವರೇ ಪ್ರಸಿದ್ಧ ವಕೀಲರಂತೆ! ಹ್ಯಾಗಿದೆ ನೋಡಿರಿ? ಈಗಿನ ನ್ಯಾಯನಿರ್ಣಯ ಪದ್ಧತಿಯನ್ನೂ, ಕಾಯಿದೆ ದೇವಿಯನ್ನೂ ಇಷ್ಟು ನಿಂದೆಗೆ ಗುರಿಮಾಡಿದವರೆಂದರೆ, ವಕೀಲರೇ! ಎಂದು ಸಾರಿ ಸಾರಿ ಹೇಳಬಹುದು. ರಾವಸಾಹೇಬ, ಪರರ ಗುಣದೋಷಗಳನ್ನು ಬೈಲಿಗೆಳೆಯುವದರಿಂದ ಬರುವ ಲಾಭವಾದರೂ ಏನು? ಅದರೆ, ತಮಗೆ ನಮಸ್ಕಾರ ಮಾಡಿ ಇಷ್ಟೇ ಬೇಡಿಕೊಳ್ಳುತ್ತೇನೆ; ಆದದ್ದಾಗಿ ಹೋಯಿತು, ನನ್ನ ಅತ್ತಿಗೆಯಾದ ಕಮಲಾಬಾಯಿಯೂ, ತಮ್ಮನಾದ ಮಕರಂದನೂ ನಿರಪರಾಧಿಗಳಿದ್ದು, ಪೋಲೀಸರು ಇನ್ನು ಮೇಲೆ ಅವರನ್ನೂ ದಸ್ತಗೀರ ಮಾಡುವರಂತೆ; ಆ ನಿರ್ದೋಷಿಗಳಿಗೆ ಇಲ್ಲಿಯ ವರೆಗಾದ ಅನ್ಯಾಯದ ಅಮರ್ಯಾದೆಯೇ ಸಾಕು-ಸಾಕಾಗಿರುವದು. ಕಾರಣ ದಯಾಳುಗಳವರು ನನಗೇ ಅದಷ್ಟು ಹೆಚ್ಚಿಗೆ ಶಿಕ್ಷೆ

ಯನ್ನು ವಿಧಿಸಿ, ಮಾತ್ರ ಸಮಾನ.......

ದುಃಖದಿಂದ ಮುರಲೀಧರನ ಹೃದಯವು ತಳಮಳಿಸಿ ಹೋಯಿತು. ಕುತ್ತಿಗೆಯ ನರಗಳು ಉಬ್ಬಿ, ಬಾಯಿಂದ ಮುಂದೆ ಶಬ್ದಗಳೇ ಹೊರಡ ದಂತಾಗಲು, ಅಶ್ರುಗಳನ್ನೊರಿಸಿಕೊಳ್ಳುತ್ತ ಅವನತ ಮುಖನಾಗಿ ವಿನಯ ದಿಂದ ನಿಂತುಕೊಂಡನು.

ಮುರಲೀಧರನ ಹೃದಯದ್ರಾವಕ ಸ್ಥಿತಿಯನ್ನು ನೋಡಿ, ಜಜ್ಜ ಸಾಹೇಬರ ಅಂತಃಕರಣವೂ ವ್ಯಥಿತವಾದಂತೆ ತೋರಿತು. ಅವರು ಒಂದು ದೀರ್ಘವಾದ ಉಸುರ್ಗಳೆದು:—ಅಪರಾಧಿಯ ಮಾತನ್ನು ಕೇಳಿದಿರೇನು? ಅವನು ಕಳವು ಮಾಡಿಯೇ ಇಲ್ಲವೆಂದು ಹೇಳುತ್ತಾನಲ್ಲ! ಎಂದು ಹವಾಲ ದಾರ-ವಿನಾಯಕರಾಯರನ್ನುದ್ದೇಶಿಸಿ ಕೇಳಿದರು.

ಕೂಡಲೆ ಅದಕ್ಕೆ ವಿನಾಯಕರಾಯರು:—ರಾವಸಾಹೇಬರೇ, ಅವನು ಖರೆ ಹೇಳುತ್ತಿದ್ದರೆ ಈ ಅವಸ್ಥೆಗೆಲ್ಲಿ ಬರುತ್ತಿದ್ದನು? ಮತ್ತು ಕಳವು ಮಾಡದಿದ್ದರೆ ಮ್ಯಾಜಿಸ್ಟ್ರೇಟರಾದರೂ ಹ್ಯಾಗೆ ಶಿಕ್ಷೆಯನ್ನು ವಿಧಿಸುತ್ತಿದ್ದರು? ಈ ಮುರಲಿಯೂ ಕಮಲಾಬಾಯಿಯೂ ಸರಕಾರವನ್ನು ನಿಂದಿಸ ಲಿಕ್ಕೆ ಮಾತ್ರ ಕಲಿತಿರುವರು. ಇವರಿಗೆ ಚನ್ನಾಗಿ ಪ್ರಾಯಶ್ಚಿತ್ತವಾಗಲೇ ಬೇಕು, ಎಂದು ಶ್ರೀಮಂತಿಕೆಯ ಆಢ್ಯತೆಯಿಂದ ಹೇಳಿದರು. ಆದರೂ ಜಜ್ಜ ಸಾಹೇಬರು ಸಮಾಧಾನವೃತ್ತಿಯಿಂದಲೇ ಈ ಪ್ರಕಾರ ಕೇಳಿದರು.:—

ಸಾವುಕಾರರೇ ನಾನು ಕೇಳಿದಷ್ಟೇ ಹೇಳಿರಿ. ಇದರಲ್ಲಿ ನೀವು ಕಳ್ಳರೋ, ಪಾಪ! ಆ ಬಡಪ್ರಾಣಿಗಳು ಕಳ್ಳರೋ? ಎಂಬದನ್ನು ಈಗಲೇ ತೋರಿಸುತ್ತೇನೆ. ಮೊದಲು ಹೇಳಿರಿ, ಪರಮಹಂಸ ಜ್ಯೋತಿಷಿಗಳವರ ಜ್ಯೋತಿಷ ಪತ್ರಕ್ಕೆ ಏನೆಂದು ಸಹಿ ಮಾಡುವಿರಿ? ಹೂಂ. ಹೇಳಿರಿ; ಯಾಕೆ ವಿನಾಯಕರಾವ, ಸುಮ್ಮನೆ ನಿಂತುಕೊಂಡಿರಿ?

ಕುಳಿಂದಸ್ವಾಮಿ ಹವಾಲದಾರರೂ 'ಜ್ಯೋತಿಷಪತ್ರ' ಎಂಬ ಶಬ್ದ ವು ಕಿವಿಗೆ ಬಿದ್ದ ಕೂಡಲೆ ಒಮ್ಮೆಲೆ ಗಾಬರಿಯಾದರು. ವಿನಾಯಕರಾ ಯರಂತೂ ಇದೇನೋ ನಮಗೆ ಅಳಿಗಾಲವೇ ಬಂದಿತೆಂದು ಅಂಜಿ ನಡುಗ ಹತ್ತಿದರು! ಆದರೆ ಬಾಯಿಬಡುಕರಾದ ಹವಾಲದಾರ ಸಾಹೇಬರು ಮಾತ್ರ ಭೀತಿಗೊಂಡದ್ದನ್ನು ಮುಚ್ಚಿಟ್ಟು:-ರಾವಸಾಹೇಬ, ಯಾವ ಪರಮಹಂಸರು? ಎಲ್ಲಿಯ ಜ್ಯೋತಿಷ ಪತ್ರವು? ಯಾರು ಸಹಿ ಮಾಡಿದವರು? ನಮಗೆ

ಗೊತ್ತೇ ಇಲ್ಲ; ಮತ್ತು ಪರಮಹಂಸ ಜ್ಯೋತಿಷಿಗಳವರ ಹೆಸರನ್ನೇ ನಾವು ಕೇಳಿಲ್ಲ, ಎಂದು ಆಶ್ಚರ್ಯಗೊಂಡವರಂತೆ ಹೇಳಿದರು.

ನೋಡ-ನೋಡುವಷ್ಟರಲ್ಲಿ ಜಜ್ಜ ಸಾಹೇಬರ ತೇಜಃಪುಂಜವಾದ ನೇತ್ರಗಳು ಗುಲಗಂಜಿಯಂತಾದವು. ಸಿಟ್ಟಿನಿಂದ ಅವರ ಮುಖವು ಆರಕ್ತ ವಾದದ್ದಲ್ಲದೆ, ಕೆಳದುಟಿಯು ಕಂಪಿಸಹತ್ತಿತು. ಈಗ ಅವರು ಗುಡುಗಿ ನಂಥ ಸ್ವರದಿಂದ:—ಹರಾಮಖೋರ! ಸುಳ್ಳು ಹೇಳುವಿಯಾ? ಇಗೋ, ಕಣ್ದೆರೆದು ನೋಡು. ಇವು ಯಾರ ಹಸ್ತಾಕ್ಷರಗಳು? ಎಂದು ನುಡಿದು, ತಮ್ಮ ಜೇಬಿನೊಳಗಿಂದ ಎರಡು ಜ್ಯೋತಿಷ ಪತ್ರಗಳನ್ನು ತೆಗೆದು ಮೇಜಿನ ಮೇಲೆ ಒಗೆದು, ಮತ್ತೆ:—ಹೇಳು ಇನ್ನಾದರೂ ನಿಜ ಹೇಳು. ರಾಮಚಂದ್ರ ಪಂತರ ಮನೆಯಲ್ಲಿ ಕಳವು ಮಾಡಿಸಿದವನು ನೀನೇ ಅಲ್ಲವೇ? ವಿನಾಯಕಾ! ಸಹಜಾತ ಶತ್ರುವಾದ ವಿನಾಯಕಾ!! ಹೇಳು, ತಮ್ಮಂದಿರ ಮೇಲೆ ಸುಳ್ಳು ಆರೋಪ ಹೊರಿಸಿರುವೆಯೋ, ಇಲ್ಲವೋ? ಯಾಕೆ, ಇಬ್ಬರೂ ಮಾತಾಡ ಲೊಲ್ಲಿರಿ. (ಹಿಂದಕ್ಕೆ ತಿರುಗಿ)ಮಹಮ್ಮದ, ತೆಗೆ, ಆ ಸದ್ಗುಣಿಯಾದ ಮುರ ಲೀಧರನ ಕೈಯೊಳಗಿನ ಬೇಡಿಯನ್ನು ಮೊದಲು ತೆಗೆ; ಮತ್ತು ಅವನ್ನೇ ಈ ನೀಚರಿಬ್ಬರ ಕೈಗಳನ್ನು ಕೂಡಿಸಿ ತೊಡಿಸು. ಸಬ್ ಇನಸ್ಪೆಕ್ಟರರೇ, ಈಗಲೇ ಈ ವಿನಾಯಕರಾಯನ ಮನೆಯನ್ನು ಜಪ್ತ ಮಾಡಲಿಕ್ಕೆ ಪೋಲೀ ಸರನ್ನು ಕಳಿಸಿರಿ. ಇಗೋ ತಕ್ಕೊಳ್ಳಿರಿ, ಈ ಯಾದಿಯನ್ನು. ಇದರಲ್ಲಿ ಬರೆದಷ್ಟು ದಾಗೀನೆಗಳು ನಡುಮನೆಯ ಟ್ರೇಝುರಿಯಲ್ಲಿ ಇವೆ. ವಿನಾ ಯಕಾ, ಟ್ರೇಝುರಿಯ ಕೀಲಿಯ ಕೈಯನ್ನು ಕೊಡು, ಂದು ಹೇಳಿದರು. ವಿನಾಯಕರಾಯರು ದಂಗು ಬಡಿದು, ಸುಮ್ಮನೆ ಕೀಲಿಯ ಕೈಗಳ ಸರವನ್ನು ತೆಗೆದು ಕೊಟ್ಟರು. ಅಷ್ಟರಲ್ಲಿ ಮಹಮ್ಮದನು ಮುರಲಿಯ ಬೇಡಿಯನ್ನು ತೆಗೆದು, ಅದರಿಂದಲೇ ಹವಾಲದಾರ-ವಿನಾಯಕರಾಯರ ಕೈಗಳನ್ನು ಬಂಧಿ ಸಿದನು!

ಈಗ ಮುರಲೀಧರನಿಗೆ ಪರಮಾನಂದವಾಯಿತು. ತಾನು ಎಲ್ಲಿರುವೆ ನೆಂಬ ಎಚ್ಚರವಿಲ್ಲದೆ "ಸತ್ಯಕ್ಕೆ ಸಾವಿಲ್ಲ!" ಎಂದು ಉಚ್ಚಸ್ವರದಿಂದ ಕೂಗುತ್ತ ಜನದಟ್ಟಣೆಯಿಂದಾಚೆಗೆ ಕುಳಿತುಕೊಂಡಿದ್ದ ಸೀತಮ್ಮ-ಕಮಲಾಬಾಯಿ ಯರ ಬಳಿಗೆ ಓಡುತ್ತ ನಡೆದನು. ಮಾತು-ಕಥೆಗಳಿಲ್ಲದೆ ಖಿನ್ನ ಮುದ್ರೆ ಯಿಂದ ಕುಳಿತುಕೊಂಡಿದ್ದ ಸೀತಾಬಾಯಿಯು ಮುರಲಿಯನ್ನು ನೋಡಿ,

ಒಮ್ಮೆಲೆ ಎದ್ದು ನಿಂತಳು. ಕಮಲಾಬಾಯಿಯಂತೂ ಆನಂದಾಶ್ಚರ್ಯಗಳಿಂದ ಕೂಡಿದವಳಾಗಿ:—"ಎಲ, ಇದೇನು! ಮುರಲೀಧರನು ಬಿಡುಗಡೆಯಾಗಿ ಬಂದನಲ್ಲಾ!!" ಎಂದು ನುಡಿಯುವಷ್ಟರಲ್ಲಿ ಮುರಲೀಧರನು ಪುಟನೆಗೆಯುತ್ತ ಅಲ್ಲಿಗೆ ಬಂದು:—ಅವ್ವಾ, ಯಮದೂತರ ಕೈಯೊಳಗಿಂದ ಒಮ್ಮೆ ಪಾರಾಗಿ ಬಂದೆನು. ದಯಾಳುವಾದ ಜಜ್ಜ ಸಾಹೇಬರು ನಿರ್ದೋಷಿಯಾದ ನನ್ನನ್ನು ಬಿಟ್ಟು ಬಿಟ್ಟರು! ಎಂದು ಅನ್ನುತ್ತ, ಗಾಢವಾದ ಪ್ರೇಮದಿಂದ ತಾಯಿಯ ಪಾದಗಳಿಗೆ ನಮಸ್ಕರಿಸಿದನು.

ಸೀತಮ್ಮನಿಗೆ ತಾನು ಜಾಗೃದಾವಸ್ಥೆಯಲ್ಲಿರುವೆನೋ, ಸ್ವಪ್ನಾವಸ್ಥೆಯಲ್ಲಿರುವೆನೋ ಎಂಬದು ತಿಳಿಯದಾಯಿತು. ಆ ಪುತ್ರವತ್ಸಲಳು ಮುರಲೀಧರನ ಮುದ್ದು ಮುಖವನ್ನು ಎರಡೂ ಕೈಗಳಿಂದ ಹಿಡಿದು ಪ್ರೇಮದೃಷ್ಟಿಯಿಂದ ನೋಡುತ್ತ:—ದೇವರೇ, ಈಗ ನಾನು ಏನು ನೋಡುತ್ತಿರುವೆನು! ಎಂಥ ಸುಖವನ್ನನುಭವಿಸುತ್ತಿರುವೆನು!! ನನ್ನ ಮೋಹದ ಪುತ್ಥಳಿಯು ನಿರ್ದೋಷಿಯಾಗಿ ಬಿಡುಗಡೆ ಹೊಂದಿ ಬರುವದೆಂದು ಕನಸು-ಮನಸಿನಲ್ಲಿಯೂ ಎಣಿಸಿದ್ದಿಲ್ಲ. ದಯಾನಿಧೇ! ನಿನ್ನ ಲೀಲೆಯು ಅಗಾಧವಾದದ್ದು. ನನ್ನ ಮಗನನ್ನು ಈ ಮಹತ್ಸಂಕಟದೊಳಗಿಂದ ಪಾರು ಮಾಡಲಿಕ್ಕೆ ನೀನೇ ಜಜ್ಜರ ರೂಪದಿಂದ ಬಂದಂತೆ ತೋರುತ್ತದೆ!

ಹೀಗೆನ್ನುವಾಗ ಸೀತಮ್ಮನ ಕಣ್ಣುಗಳು ಅಶ್ರುಗಳಿಂದ ತುಂಬಿ, ಮಗನ ಸುಂದರ ಮುಖವು ಕಾಣದಾಯಿತು. ಪ್ರೇಮದಿಂದ ಅಂತಃಕರಣವು ಉಕ್ಕೇರಿ, ಕಂಠವು ಸದ್ಗದಿತವಾಯಿತು. ಮುರಲೀಧರ-ಕಮಲಾಬಾಯಿಯರ ಸ್ಥಿತಿಯಾದರೂ ಹೀಗೆಯೇ ಆಗಿತ್ತು. ಕೆಲ ಹೊತ್ತಿನ ವರೆಗೆ ಯಾರ ಮುಖದಿಂದಲೂ ಮಾತುಗಳು ಹೊರಡಲಿಲ್ಲ. ಅಷ್ಟರಲ್ಲಿ ರಂಗರಾಯರು ಬಂದರು. ಅವರು ಇದೆಲ್ಲವನ್ನು ನೋಡಿ, ಮುಗುಳು ನಗೆ ನಗುತ್ತ:—ಅಮ್ಮನವರೇ, ಹ್ಯಾಗಿದೆ ನೋಡಿದಿರಾ, ಈ ವಿಚಿತ್ರವನ್ನು? ಪಾಪವು ಎಲ್ಲಿ ಹೋಗುವದು? ನಿರಪರಾಧಿಗಳಿಗೆ ಶಿಕ್ಷೆ ಮಾಡಿಸಲಿಕ್ಕೆ ಹೋಗಿ, ಈಗ ತಾವೇ ಶಿಕ್ಷೆಯನ್ನನುಭವಿಸುವ ಹೊತ್ತು ಬಂದಿತು. ಅಕೋ ನೋಡಿರಿ, ಕುಳಿಂದಸ್ವಾಮಿ-ವಿನಾಯಕರಿಗೆ ಬೇಡಿಯನ್ನು ಹಾಕಿ ಹೇಗೆ ನಿಲ್ಲಿಸಿರುವರು? ಎಂದು ಹೇಳಿ, ಸಥಿಯಿಂದ ಮಗಳ ಬಳಿಯಲ್ಲಿ ಕುಳಿತುಕೊಂಡರು.

ಸಂಸಾರಿಕರಿಗೆ ಸುಖವು ಕ್ಷಣಿಕವಾದುದಲ್ಲವೇ? ನಿಮಿಷದ ಹಿಂದೆ ಆನಂದಸಾಗರದಲ್ಲಿ ಮುಳಿಗೇಳುತ್ತಿದ್ದ ಸೀತಮ್ಮನು ರಂಗರಾಯರ ಈ ಮಾತುಗಳನ್ನು ಕೇಳಿದ ಕೂಡಲೆ ಮೆಟ್ಟಬಿದ್ದಳು. ಪ್ರೇಮಾಶ್ರುಗಳು ಈಗ ದುಃಖಾಶ್ರುಗಳಾದವು. ಆ ಪುತ್ರಪ್ರೇಮಿಯು ಕಾತರಸ್ವರದಿಂದ:— "ಏನು! ವಿನಾಯಕನಿಗೆ ಬೇಡಿಯನ್ನು ಹಾಕಲಿಕ್ಕೆ ಕಾರಣವೇನು? ಹವಾಲದಾರರು ಅಂಥದೇನು ಮಾಡಿದ್ದರು?" ಎಂದು ಆಸ್ಥೆಯಿಂದ ಕೇಳಿದಳು. ಅದಕ್ಕೆ ರಂಗರಾಯರು:—ನೀವು ಇನ್ನೂ ಕಾರಣವನ್ನೇ ಕೇಳುವಿರಲ್ಲಾ? ವಿನಾಯಕನು ಮುರಲೀಧರನ ಮೇಲೆ ಸುಳ್ಳು ಖಟ್ಲೆಯನ್ನು ಹೊರಿಸಿದ್ದಲ್ಲದೆ, ಇಬ್ಬರೂ ಕೂಡಿ ಹಿಂದಕ್ಕೆ ರಾಮಚಂದ್ರ ಪಂತರ ಮನೆಯಲ್ಲಿ ಕಳವು ಮಾಡಿಸಿದ್ದರಂತೆ. ಅದಕ್ಕಾಗಿಯೇ ಈಗ ಜಜ್ಜಸಾಹೇಬರು ವಿನಾಯಕನ ಮನೆಯನ್ನು ಜಪ್ತ ಮಾಡಲಿಕ್ಕೆ ಪೋಲೀಸರನ್ನು ಕಳಿಸಿರುವರು.

ಸೀತಮ್ಮನ ಅಂತಃಕರಣವು ವ್ಯಥಿತವಾಯಿತು. ಅವಳು ಒಂದು ದೀರ್ಘಶ್ವಾಸಗರೆದು:—ದೇವರೇ, ಮತ್ತೆ ಇದೇನನರ್ಥವನ್ನು ತಂದೆ! ಒಬ್ಬ ಮಗನು ಬಿಡುಗಡೆಯಾಗಿ ಬರುವಷ್ಟರಲ್ಲಿ ಮತ್ತೊಬ್ಬ ಮಗನು ಕಷ್ಟಕ್ಕೆ ಗುರಿಯಾದನಲ್ಲ! ರಂಗರಾಯರೇ, ನಡೆಯಿರಿ. ಆ ತಿಳಿಗೇಡಿಯು ನಮಗೆ ಕೇಡು ಬಗೆದಿದ್ದರೂ, ನಾವು ಅವನ ಹಿತಬಯಸಬೇಕಾಗುತ್ತದೆ. ಹೊಸ ಸಾಹೇಬರು ದಯಾಳುಗಳಿದ್ದಂತೆ ತೋರುತ್ತದೆ. ಅವರಿಗೆ ಹೇಳಿಕೊಂಡು ವಿನಾಯಕನನ್ನು ಬಿಡಿಸುವ ಪ್ರಯತ್ನ ಮಾಡೋಣ, ನಡೆಯಿರಿ, ಎಂದು ನುಡಿದು ಎದ್ದು ನಿಂತಳು.

ಇದನ್ನು ಕೇಳಿ ರಂಗರಾಯರಿಗೆ ನಗೆ ಬಂದಿತು. ಅಹಿತ ಮಾಡಿದವನಿಗೆ ಹಿತಮಾಡಬೇಕೆಂದರೆ, ಈಗಿನ ಕಾಲಕ್ಕೆ ಯಾರಿಗೆ ನಗೆಯಾಗಲಿಕ್ಕಿಲ್ಲ? ಅವರು ಸೀತಮ್ಮನೆದುರಿಗೆ ಅಡ್ಡವಾಗಿ ನಿಂತು:—ಅಮ್ಮಾ, ಆ ಪಾಪಿಗೆ ಬೇಡಿಯನ್ನು ಹಾಕಿದರೆ, ನಿಮಗೇಕೆ ಇಷ್ಟು ದುಃಖವು? ಕೃತಕರ್ಮದ ಫಲವನ್ನು ಭೋಗಿಸಿ ಬರಲೊಲ್ಲನೇಕೆ? ನಿಮಗೇತಕ್ಕೆ ಅದರ ಚಿಂತೆಯು? ಅವನು ಮಾಡಿದ ನೀಚ ಕೃತ್ಯಗಳನ್ನು ನೆನೆಸಿಕೊಂಡರೆ ಮೈಯಲ್ಲ ಉರಿಯುತ್ತದೆ; ಇಷ್ಟಾಗಿ ಜಜ್ಜ ಸಾಹೇಬರು ಮಹಾ ನ್ಯಾಯನಿಷ್ಠುರರಿದ್ದಂತೆ ತೋರುತ್ತದೆ. ನಡೆಯಿರಿ, ಮುರಲಿಯನ್ನು ಕರೆದುಕೊಂಡು ಸುಮ್ಮನೆ ಮನೆಗೆ ನಡೆಯಿರಿ, ಎಂದು ಹೇಳಿದರು.

ಇದು ಸೀತಮ್ಮನಿಗೆ ಸರಿಬರದೆ:—ರಾಯರೇ, ತಾಯಿಯ ಕರಳು ಎಲ್ಲಿ ಬಿಡುವದು? ಎಷ್ಟೇ ನೀಚನಿದ್ದರೂ ವಿನಾಯಕನು ನನ್ನ ಮಗನೇ ಅಲ್ಲವೇ? ಅವನು ತಿಳಿಗೇಡಿತನದಿಂದ ಮಾಡಿದ ತಪ್ಪನ್ನು ನಾವು ಸಹಿಸಿ ಕೊಳ್ಳದೆ ಮತ್ತಾರು ಸಹಿಸಿಕೊಳ್ಳಬೇಕು? ಸರಿಯಿರಿ. ನೀವು ಬಂದರೂ ಅಷ್ಟೇ; ಬಾರದಿದ್ದರೂ ಅಷ್ಟೇ. ನಾನೊಬ್ಬಳೇ ಹೋಗಿ, ಸಾಹೇಬರಿಗೆ ಹೇಳಿಕೊಳ್ಳುವೆನು, ಎಂದು ನುಡಿದು ರಂಗರಾಯರು ಬೇಡೆನ್ನುತ್ತಿರಲು, ಗದ್ದಲದಲ್ಲಿ ಜನರನ್ನು ಸರಿಸುತ್ತ ಹೋದಳು.

ಇತ್ತ ಜಜ್ಜ ಸಾಹೇಬರು ಎದ್ದು ನಿಂತು ಕೂಡಿದ ಎಲ್ಲ ಜನರನ್ನುದ್ದೇಶಿಸಿ ಉಚ್ಚಸ್ವರದಿಂದ:—"ಎಲ್ಲ ಖಾತೆಯ ನೌಕರದಾರರೇ, ಮತ್ತು ಸದ್ಗೃಹಸ್ಥರೇ, ಈ ವರೆಗಾದ ವಿಚಿತ್ರವನ್ನು ನೋಡಿ ನಿಮ್ಮಲ್ಲಿಯ ಕೆಲವರು ಹಲವು ಬಗೆಯಾಗಿ ಶಂಕಿಸಿರಬಹುದು. ನೀವು ಶಂಕಿಸಿದ್ದೂ ತಪ್ಪಲ್ಲ. ಪತ್ತೇದಾರಿಯ ಕೆಲಸವು ಬಹು ಗೌಪ್ಯವಾದದ್ದು. ಅದರ ಹಿಂದು ಎಳೆಯು ಬಹಿರಂಗ ಪಟ್ಟರೆ, ಸಾಕು; ನೂತದ್ದೆಲ್ಲ ಹಂಜಿಯಾಗುವ ಸಂಭವವಿರುತ್ತದೆ. ಅದಕ್ಕಾಗಿ ನಾನು ಪ್ರತಿಯೊಂದು ವಿಷಯವನ್ನು ಮೊದಲು ಬಚ್ಚಿಡುವ ಪ್ರಸಂಗ ಬಂದಿತು. ಈಗ ಅದೆಲ್ಲವನ್ನೂ ಸಾದ್ಯಂತವಾಗಿ ಹೇಳುತ್ತೇನೆ, ಕೇಳಿರಿ. ಈ ಊರಿಗೆ ವರ್ಗವಾಗಿ ಬರುವ ಮೊದಲು ಈ ಕಳವಿನ ಸಂಗತಿಯು ನನಗೆ ತಿಳಿದಿತ್ತು; ಆದರೆ ಅದು ನಿಜವಾಗಿ ಕಾಣದ್ದರಿಂದ ಈ ಊರಿಗೆ ನಿನ್ನೆ ಬಂದಮೇಲೆ ಕೆಲವು ಜನರ ಮುಖದಿಂದ ಹಲಕೆಲವು ನಿಜ ಸಂಗತಿಗಳನ್ನು ವೇಷಾಂತರದಿಂದ ತಿಳಿದುಕೊಂಡೆನು; ಆದರೂ ಅವೆಲ್ಲ ಪುರಾವೆಗೆ ಯೋಗ್ಯ ಕಾಣಲಿಲ್ಲ. ಈ ದಿವಸ ಮುಂಜಾನೆ ಸಂನ್ಯಾಸಿಯಾದ ನಾನು ವಿರಕ್ತವೇಷದಿಂದ ಇದೇ ಮಿ. ಮೋಹಿತೆ ವಕೀಲರ ಮನೆಗೆ ಹೋದೆನು. ಇವರನ್ನೇ ವಿನಾಯಕನು ತಮ್ಮ ಖಟ್ಲೆಗೆ ನಿಯಮಿಸಿದ್ದರಿಂದ ನಿಜ ಸಂಗತಿಯು ಇವರಿಗೆ ಗೊತ್ತಿರದೇನು ಮಾಡೀತು? ಇವರಲ್ಲಿ ಪರ್ಯಾಯದಿಂದ ಮಾತಿಗೆ ಮಾತು ತೆಗೆದು, ನಿಜಸಂಗತಿಯನ್ನೆಲ್ಲ ತಿಳಿದುಕೊಂಡೆನು. ಆ ಮೇಲೆ ವೇಷ ಬದಲಾಯಿಸಿಕೊಂಡು, ಜ್ಯೋತಿಷಿ ಪರಮಹಂಸನಾಗಿ ವಿನಾಯಕನ ಮನೆಗೆ ಹೋದೆನು. ಅಲ್ಲಿ ಕರ್ಮ-ಧರ್ಮ ಸಂಯೋಗದಿಂದ ಈ ಚೀಟಿಯು ಟ್ರೇಝುರಿಯ ಮುಂದೆ ಸಿಕ್ಕಿತು. ಇದನ್ನೀಗ ಓದುತ್ತೇನೆ, ಕೇಳಿರಿ:—

ರಾಮಚಂದ್ರಪಂತರ ಮನೆಯಲ್ಲಿ ನನ್ನ ಪಾಲಿಗೆ ಸಿಕ್ಕ ದಾಗೀನೆಗಳ ವಿವರ:-ಹಿಂಕಿಯ ಜೋಡು ೨ ಪಾಟ್ಲಿಯ ಜೋಡು ೩ ಬಳೆಯ ಜೋಡು ೧

ಇವು ತಾ||....ನೇ ದಿವಸ ಮಾರಾಟವಾದವು. ಇನ್ನೂ ಮಾರದೇ ಇರತಕ್ಕವು, ಕಂಠಿಯ ಹಾರ ೧ ಮುತ್ತಿನಹಾರ ೧ ಉಂಗುರಗಳು ೧೫. ಕುಳಿಂದಸ್ವಾಮಿ.

ಇದಿಷ್ಟೇ ಚೀಟಿಯ ಆಧಾರದಿಂದ ಕುಳಿಂದ ಸ್ವಾಮಿಯೊಬ್ಬನೇ ಈ ಕಳವು ಮಾಡಿಲ್ಲವೆಂದೂ, ಆ ಮುತ್ತಿನಹಾರ-ಉಂಗುರಗಳನ್ನು ಈಗ ವಿನಾಯಕನಲ್ಲಿ ಹಿತ್ತಿ ಇಡಲಿಕ್ಕೆ ಅಥವಾ ಮಾರಲಿಕ್ಕೆ ಬಂದಿರುವನೆಂದೂ, ದಾಗೀನೆಗಳು ಟ್ರೇಝುರಿಯಲ್ಲಿ ಇರಬಹುದೆಂದೂ ತರ್ಕಿಸಿದೆನು; ಮತ್ತು ಇದರಂತೆಯೇ ಕುಳಿಂದ ಸ್ವಾಮಿಯ ಜ್ಯೋತಿಷ ಪತ್ರವನ್ನೂ ವಿನಾಯಕನ ಜ್ಯೋತಿಷ ಪತ್ರವನ್ನೂ ಬರೆದುಕೊಟ್ಟು, ಮೊದಲು ಮಾಡಿದ ಕರಾರಿನ ಪ್ರಕಾರ ಅವರಿಂದ ಸಹಿ ಮಾಡಿಸಿಕೊಂಡೆನು. ಇಗೋ ನೋಡಿರಿ; ಇವೇ ಆ ಜ್ಯೋತಿಷ ಪತ್ರಗಳು. ನೋಡಿದರೆ ನಿಮಗೆ ಸಮಾಧಾನವಾಗಲಿಕ್ಕಿಲ್ಲ. ಓದುವೆನು, ಕೇಳಿರಿ.

## ವಿನಾಯಕರಾಯರ ಜ್ಯೋತಿಷ ಪತ್ರ.

ನೀವು ಕೇಳುವ ಮಹತ್ಕಾರ್ಯವು ಹಿಂದು ಬಗೆಯ ಸುಳ್ಳು ಖಟ್ಲೆಯದಿರುತ್ತದೆ. ನೀವು ತಂದೆಯ ಹೊಟ್ಟೆಯಿಂದ ನಾಲ್ವರು ಮಕ್ಕಳಿದ್ದು, ಅಣ್ಣನನ್ನು ಎಲ್ಲಿಯೋ ಓಡಿಸಿದ್ದಲ್ಲದೆ, ಇಬ್ಬರು ತಮ್ಮಂದಿರನ್ನೂ ತಾಯಿಯನ್ನೂ ಬಗೆಬಗೆಯ ಕಷ್ಟಕೊಟ್ಟು ಹೊರಗೆ ಹಾಕಿರುತ್ತೀರಿ. ಅವರು ಇದೇ ಊರಲ್ಲಿದ್ದು, ಹಿಬ್ಬ ತಮ್ಮನು ನಿಮ್ಮಲ್ಲಿ ಹಿತ್ತೀ ಇಟ್ಟದ್ದ ಬಂಗಾರದ ಆಭರಣವನ್ನು ನಿಮ್ಮ ಎಲ್ಲ ರೂಪಾಯಿಗಳನ್ನು ಕೊಟ್ಟು ಹಿಯ್ದಿದ್ದರೂ, ನೀವು ರೂಪಾಯಿಗಳನ್ನು ಜಮೆ ಬರಕೊಳ್ಳಲಿಲ್ಲ; ಮುಂದೆ ಕೆಲವು ದಿವಸಗಳ ನಂತರ ಯಾರೋ ತಮ್ಮನಿಗೆ ಕೆಲವು ರೂಪಾಯಿಗಳನ್ನು ಕಳಿಸಿರುವ ಸುದ್ದಿಯನ್ನು ತಿಳಿದುಕೊಂಡು ಪೋಲೀಸ ಹವಾಲದಾರರಿಂದ ತಮ್ಮನನ್ನು ಹೊಡೆಯಿಸಿ, ನಮ್ಮ ರೂಪಾಯಿಗಳೆಂದು ಸುಳ್ಳು ಹೇಳಿ ಆ ಎಲ್ಲ ರೂಪಾಯಿಗಳನ್ನೂ, ಅವರು ಬಳಸಿದ ಸ್ವಲ್ಪ ರೂಪಾಯಿಗಳ ಬದಲಾಗಿ, ನಿಮ್ಮಲ್ಲಿ ಹಿತ್ತಿ ಇಟ್ಟದ್ದ ಆಭರಣವನ್ನೂ ತೆಗೆದುಕೊಂಡು ಬಂದಿರಿ. ಮುಂದೆ ನಿಮ್ಮ ತಮ್ಮನು ರೂಪಾಯಿಗಳನ್ನು ಕೊಟ್ಟರೂ ಆ ಆಭರಣವನ್ನು ನೀವು ಕೊಡದಂತಾಗಲು, ನಿಮ್ಮ ಪತ್ನಿಗೆ ಏನೋ ಸುಳ್ಳು ಹೇಳಿ ಅವನು ತನ್ನ ಆ ಆಭರಣವನ್ನು ಹಿಯ್ದನು. ಇದನ್ನು ಕೇಳಿ, ನೀವು ಸಿಟ್ಟಾಗಿ, ಮೊದಲು ನಿಮಗೆ ರೂಪಾಯಿ ಕೊಡಿಸಿದ್ದ ಹವಾಲದಾರರ ಸಹಾಯದಿಂದ ನಿಮ್ಮ ತಮ್ಮನು ನಸಕಿನಲ್ಲಿ ಹಿಂದು ಜಲಾಶಯಕ್ಕೆ ಹೋಗಿರಲು, ಮೋಸದಿಂದ ಅವನನ್ನು ಜನಸಂಚಾರವಿಲ್ಲದ ಸ್ಥಳ

ದಲ್ಲಿ ಪ್ರತಿಬಂಧಿಸಿಟ್ಟು, ತಮ್ಮನು ನಮ್ಮ ಮನೆಯಲ್ಲಿ ಕಳವು ಮಾಡಿಕೊಂಡು ಹೋಗಿರುವನೆಂದು ಫಿರ್ಯಾದಿ ಮಾಡಿದಿರಿ. ಪೋಲೀಸರು ತಮ್ಮನ ಮನೆಯನ್ನು ಜಪ್ತ ಮಾಡಲಾಗಿ ನಿಮ್ಮ ಅತ್ತಿಗೆಯ ಹತ್ತರ ಮೊದಲು ನಿಮ್ಮಲ್ಲಿ ಒತ್ತೀ ಇಟ್ಟದ್ದ ಆಭರಣವು ಸಿಕ್ಕಿತು. ಕೂಡಲೆ ಪೋಲೀಸರು ಅವಳನ್ನು ಚಾವಡಿಗೆ ಒಯ್ದು, ಆ ಮೇಲೆ ತಮ್ಮನನ್ನು ಹುಡುಕಹತ್ತಿದರು. ಅದೇ ದಿನ ರಾತ್ರಿ ನೀವು ಪ್ರತಿಬಂಧದಲ್ಲಿಟ್ಟದ್ದ ತಮ್ಮನನ್ನು ಮುಕ್ತಮಾಡಬಿಡಲು, ಪೋಲೀಸರು ಅವನನ್ನು ಚಾವಡಿಗೆ ಒಯ್ದು, ಆತನ ಅರಿವೆ-ಅಂಚಡಿಗಳಲ್ಲಿ ಹುಡುಕಲಾಗಿ ಕೆಲವು ಆಭರಣ-ರೂಪಾಯಿಗಳು ಸಿಕ್ಕವು. ತಮ್ಮನನ್ನು ಪ್ರತಿಬಂಧದಲ್ಲಿಡುವಾಗ್ಗೆ ನೀವೇ ಅವನಿಗೆ ತಿಳಿಯದಂತೆ ಅವನ ಅರಿವೆಯಲ್ಲಿ ಆ ರೂಪಾಯಿ-ಆಭರಣಗಳನ್ನು ಕಟ್ಟಿಟ್ಟದ್ದಿರಿ. ಮುಂದೆ ನೀವು ಪೋಲೀಸರ ಕಡೆಯಿಂದ ಮನಬಂದಂತೆ ತಮ್ಮನಿಗೆ ಹೊಡೆಯಿಸಿ, ದೊಡ್ಡ ತಮ್ಮನು ಕಳವು ಮಾಡಿ, ಚಿಕ್ಕ ತಮ್ಮ-ಅತ್ತಿಗೆಯರ ಕೈಯಲ್ಲಿ ಕಳವಿನ ಮಾಲನ್ನು ಕೊಟ್ಟನೆಂದೂ, ಅವರು ಬಚ್ಚಿಡುವದಕ್ಕಾಗಿ ಒಂದು ಹಾಳು ಜಲಾಶಯದಲ್ಲಿ ಒಗೆದಿರುವರೆಂದೂ, ಅವರ ಮುಖದಿಂದಲೇ ಪೋಲೀಸ ಅಮಲದಾರರಿಗೆ ಹೇಳಿಸಿದಿರಿ; ಮತ್ತು ಅದರಂತೆ ಮೊದಲೇ ಒಗೆದಿದ್ದ ಹಾಳುಜಲಾಶಯದೊಳಗಿನ ಆಭರಣ-ರೂಪಾಯಿಗಳನ್ನು ತೆಗೆಯಿಸಿ, ದೊಡ್ಡ ತಮ್ಮನನ್ನು ಸೆರೆಮನೆಯಲ್ಲಿಡಿಸಿದಿರಿ. ಈ ದಿವಸ ಅವನಿಗೆ ಎರಡು ವರ್ಷಗಳ ಶಿಕ್ಷೆಯಾಗುವದು. ಪರಮಹಂಸ ಜ್ಯೋತಿಷಿ.

ಈ ಜ್ಯೋತಿಷಪತ್ರದೊಳಗಿನ ಎಲ್ಲ ಸಂಗತಿಗಳೂ ನಿಜವಿದ್ದು, ಇದಕ್ಕೆ ನನ್ನ ಒಪ್ಪಿಗೆಯದೆ. ವಿನಾಯಕರಾವ ಅಣ್ಣಾಜಿರಾವ ಕುಲಕರಣಿ, ತಾ||....

## ಹವಾಲದಾರರ ಜ್ಯೋತಿಷ ಪತ್ರ.

ನೀವು ಈಗ ಮಾಡಿದ ಒಂದು ಕಳವಿನ ವಿಷಯಕ್ಕೆ ಕೇಳುವಿರಿ. ಇದೇ ಊರಿನ ಒಬ್ಬ ಧನಿಕನ ಮನೆಯಲ್ಲಿ ನೀವು ಕಳವು ಮಾಡಿಸಿರುವಿರಿ. ಅದರಲ್ಲಿ ನಿಮ್ಮ ಪಾಲಿಗೆ ಬಂದಿದ್ದ ಆರುಬಗೆಯ ಬಂಗಾರ-ಮುತ್ತಿನ ಆಭರಣಗಳಲ್ಲಿ ನಾಲ್ಕು ಬಗೆಯ ಬಂಗಾರದ ಅಭರಣಗಳನ್ನು ಮೊದಲೇ ಮಾರಿರುವಿರಿ. ಈಗ ಉಳಿದ ಎರಡು ಬಗೆಯ ಮುತ್ತು-ಬಂಗಾರದ ಆಭರಣಗಳನ್ನು ಇಲ್ಲಿಗೆ ಮಾರಲಿಕ್ಕೆ ಬಂದಿರುತ್ತೀರಿ. ಈ ಕಳವು ಪತ್ತೆ ಆಗಲಾರದು. ದಕ್ಕಿಹೋಗುವದು.

ಈ ಜ್ಯೋತಿಷಪತ್ರದೊಳಗಿನ ಎಲ್ಲ ಸಂಗತಿಗಳೂ ನಿಜವಿದ್ದು, ಇದಕ್ಕೆ ನನ್ನ ಒಪ್ಪಿಗೆಯದೆ. ಕುಳಿಂದಸ್ವಾಮಿ ಪೋ|| ಹವಾಲದಾರ, ತಾ||....

ಸಭಿಕರೇ, ಕೇಳಿದಿರಾ! ಜ್ಯೋತಿಷಪತ್ರಗಳ ಸಂಗತಿಯನ್ನು. ಮುರಲೀಧರನು ನಿರ್ದೋಷಿಯೆಂದು ಈಗ ನಿಮ್ಮೆಲ್ಲರಿಗೂ ಪೂರ್ಣಮನವರಿಕೆಯಾಗಿರಬಹುದು. ಹೀಗಿದ್ದು ಶಿಕ್ಷೆಯನ್ನು ವಿಧಿಸಿದ್ದರೆ, ಎಷ್ಟು ಅನ್ಯಾಯವಾಗುತ್ತಿತ್ತು? ಪಾಪ! ಆ ಬಡವನು ಎಷ್ಟು ಶಿಕ್ಷೆಯನ್ನು ವಿಧಿಸಿದ್ದರೂ ಅನುಭೋಗಿಸಿ ಬರುತ್ತಿದ್ದನು; ಆದರೆ ಹೀಗೆ ಅನ್ಯಾಯದ ಅನುಭವ ಹೊಂದಿದವರು ಎಂದಾದರೂ ಕೋರ್ಟ-ಕಚೇರಿಗಳನ್ನೂ, ಸರಕಾರವನ್ನೂ ನಂಬಬಹುದೋ? ಇಲ್ಲ, ಎಂದಿಗೂ ನಂಬುವದಿಲ್ಲ; ಆದರೆ ಹೀಗೆಯೇ ಇನ್ನು ಮುಂದೆ ಅನ್ಯಾಯಗಳು ನನ್ನ ಕಾಲದಲ್ಲಿ ಆಗಬಾರದೆಂದು ಬಯಸುತ್ತೇನೆ.

ಜಜ್ಜಸಾಹೇಬರ ಈ ಭಾಷಣದಿಂದ ಪ್ರತಿಯೊಬ್ಬ ನೌಕರದಾರರ ಜ್ಞಾನಚಕ್ಷುಗಳು ಒಮ್ಮೆಲೆ ತೆರೆದು, ಅವರು ಆಶ್ಚರ್ಯಮಗ್ನರಾಗಿರಲು, ಸೀತಮ್ಮನು ಅಂಜಂಜುತ್ತ ಜಜ್ಜಸಾಹೇಬರ ಮುಂದೆ ಬಂದು ನಿಂತು ಕೈಜೋಡಿಸಿ, ವಿನಯದಿಂದ:—ಸಾಹೇಬರೇ, ತಾವು ದಯಾಳುವಾಗಿ ಕಾಣುತ್ತೀರಿ. ಮುರಲೀಧರನನ್ನು ಬಿಟ್ಟಂತೆ ನಮ್ಮ ವಿನಾಯಕನನ್ನೂ ಕ್ಷಮಿಸಿಬಿಟ್ಟು ಬಿಡಿರಿ. ಅವನು ತಿಳಿಗೇಡಿತನದಿಂದ ನಮಗೆ ಎಷ್ಟೇ ಕೆಡಕು ಬಯಸಿದ್ದರೂ, ಆ ಬಗ್ಗೆ ನಮಗೆ ಸ್ವಲ್ಪೂ ಸಿಟ್ಟು ಇಲ್ಲ. ತಾಯಿಯ ಕರಳು, ಜೀವವು ತಲ್ಲಣಿಸುತ್ತದೆ. ಇನ್ನಾದರೂ ಅವನಿಗೆ ತಿಳುವಳಿಕೆ ಬಂದೀತು, ಎಂದು ಹೇಳಿ, ಜಜ್ಜಸಾಹೇಬರ ಪಾದಗಳನ್ನು ಹಿಡಿದುಕೊಳ್ಳುವದಕ್ಕಾಗಿ ಹೋದಳು. ಅಷ್ಟರಲ್ಲಿ ಜಜ್ಜಸಾಹೇಬರು ಸೀತಮ್ಮನಿಗೇ ನಮಸ್ಕಾರ ಮಾಡಿ, ತಮ್ಮ ಖುರ್ಚೆಯ ಮೇಲೆ ಅವಳನ್ನು ಜುಲುಮೆಯಿಂದ ಕೂಡ್ರಿಸಿ, ಪೂಜ್ಯದೃಷ್ಟಿಯಿಂದ ನೋಡುತ್ತ:—ಅಮ್ಮಾ, ನೀನು ನನ್ನ ಪೂಜ್ಯ ದೈವತವು! ಜನ್ಮ ಕೊಟ್ಟ ತಾಯಿಯು!! ತಾಯಿಯ ಕಡೆಯಿಂದ ಮಗನು ನಮಸ್ಕಾರ ಮಾಡಿಸಿಕೊಳ್ಳಬೇಕೆ? ಕೂಡ್ರು, ಚನ್ನಾಗಿ ಕೂಡ್ರು; ಸಂಕೋಚಗೊಳ್ಳಬೇಡ. ಕರೆ, ಎಲ್ಲ ನಿನ್ನ ಪರಿವಾರವನ್ನೂ ಕರೆ. ಇಲ್ಲಿಯವರೆಗೆ ಜಜ್ಜನಾಗಿ ಅವರೆಲ್ಲರನ್ನು ನೋಡಿರುವೆನು. ಇನ್ನು ರಜನೀಕಾಂತನಾಗಿ ಅವರೆಲ್ಲರ ದರ್ಶನವನ್ನು ತಕ್ಕೊಳ್ಳುವೆನು, ಎಂದು ನುಡಿಯುವಷ್ಟರಲ್ಲಿ ಜಜ್ಜಸಾಹೇಬರ ಕಂಠವು ಸದ್ಗದಿತವಾಗಿ ಅಕ್ಷರಗಳು ಹೊರಡದಂತಾದವು. ಪ್ರೇಮಾಶ್ರುಗಳಿಂದ ನೇತ್ರಗಳು ತುಂಬಿಬಂದವು!

ಕೂಡಿದ ಎಲ್ಲ ಜನರೂ ಒಬ್ಬರ ಮುಖವನ್ನೊಬ್ಬರು ನೋಡಹತ್ತಿದರು. ಸೀತಮ್ಮನು ಒಂದು ಕ್ಷಣದಲ್ಲಿ ವಿನಾಯಕನ ಬಿಡುಗಡೆಯ ಚಿಂತೆಯನ್ನು ಪೂರ್ಣಮರೆತು, ಪ್ರೇಮಪೂರಿತ ದೃಷ್ಟಿಯಿಂದ ಮಗನ ಮುಖವನ್ನು ನೋಡಹತ್ತಿದಳು. ಸೀತಮ್ಮನು ಜಜ್ಜಸಾಹೇಬರ ಕಡೆಯಿಂದ ಎಲ್ಲಿ ಸಿಟ್ಟು ಮಾಡಿಸಿಕೊಂಡು ಬರುವಳೋ, ಎಂದು ಚಿಂತಿಸುತ್ತಿದ್ದ ರಂಗರಾಯ-ಮುರಲೀಧರರ ಮುಖಗಳು ಈಗ ಆನಂದದಿಂದ ಪ್ರಫುಲ್ಲಿತವಾದವು. ರಜನೀಕಾಂತ ಎಂಬ ಹೆಸರು ಕಿವಿಗೆ ಬಿದ್ದಕೂಡಲೆ ದೂರ ಕುಳಿತಿದ್ದ ಅವರೆಲ್ಲರೂ ಸಾವಕಾಶವಾಗಿ ಮುಂದೆ ಬಂದರು. ಜಜ್ಜಸಾಹೇಬರು ಅವರನ್ನು ನೋಡಿ, ಪ್ರೇಮಾಶ್ರುಗಳನ್ನೊರಿಸಿಕೊಳ್ಳುತ್ತ:-"ಬರ್ರಿ, ಮಾವಂದಿರೇ, ಅಂಜಬೇಡಿರಿ. ಯಾಕೆ? ಚನ್ನಾಗಿ ಗುರುತು ಹತ್ತಲೊಲ್ಲದೇನು? ಇಗೋ ನೋಡಿರಿ, ನಿಮ್ಮ ಗುರುತನ್ನು" ಎಂದು ನುಡಿದು, ಕಾಲರನ್ನು ಬಿಚ್ಚಿ ಕುತ್ತಿಗೆಯ ಕೆಳಭಾಗದಲ್ಲಿರುವ ಮಕ್ಷವನ್ನು ತೋರಿಸಿದರು. ಕೂಡಲೆ ರಂಗರಾಯರು ಅಳಿಯನನ್ನು ಬಿಗಿಯಾಗಿ ಅಪ್ಪಿಕೊಂಡು:—"ಇಂದಿನ ಸಂತೋಷಕ್ಕೆ ಮೇರೆಯೇ ಇಲ್ಲ! ರಜನೀಕಾಂತರಾವ್; ಇಲ್ಲಿಯ ವರೆಗೆ ನೀವು ಎಲ್ಲಿ ಇದ್ದಿರಿ? ಇಂಥ ದೊಡ್ಡ ಪದವಿಗೇರುವಷ್ಟು ವಿದ್ಯಾಭ್ಯಾಸವನ್ನು ಯಾರ ಸಹಾಯದಿಂದ ಕಲಿತಿರಿ?" ಎಂದು ಜಜ್ಜರ ಮೋಹಕ ಮೂರ್ತಿಯನ್ನು ನೋಡುತ್ತ ಕೇಳಿದರು.

ಜಜ್ಜಸಾಹೇಬರು ಯುರೋಪಿಯನ್ ದಂಪತಿಗಳನ್ನು ತೋರಿಸಿ:—"ಇದೇ ಮಹನಿಯರ ಸಹಾಯದಿಂದ ಕಲಿತೆನು. ಇವರೇ ನನ್ನ ಆಶ್ರಯದಾತೃಗಳು! ನನ್ನ ತಾಯಿ-ತಂದೆಗಳು!!" ಎಂದು ನುಡಿದು, ರಂಗರಾಯ-ಮುರಲೀಧರ-ಮಕರಂದರನ್ನು ತಮ್ಮ ಸಮೀಪದ ಖುರ್ಚಿಗಳ ಮೇಲೆ ಕೂಡ್ರಿಸಿಕೊಂಡರು. ಆಗ ಆ ಯುರೋಪಿಯನ್ ವೃದ್ಧಸ್ತ್ರೀಯು, ಜನದಟ್ಟಣೆಯಿಂದಾಚೆಗೆ ಕುಳಿತಿದ್ದ ಕಮಲಾಬಾಯಿಯನ್ನು ಒಬ್ಬ ಸಿಪಾಯಿಯ ಕಡೆಯಿಂದ ಕರೆಸಿದಳು. ಆ ಸಾಧ್ವಿಯು ಮತ್ತೇನು ರಗಳೆ ಏಳುವದೋ, ಎಂದು ಅಂಜಂಜುತ್ತ ಬಂದು ನೋಡುತ್ತಾಳೆ, ಅವಳಿಗೆ ಎಲ್ಲವೂ ವಿಚಿತ್ರವಾಗಿ ಕಾಣಿಸಿತು. ತನ್ನ ಅತ್ತೆಯು ಜಜ್ಜಸಾಹೇಬರ ಹತ್ತರ ಸಿಂಗರಿಸಿದ ಖುರ್ಚಿಯಮೇಲೆ ಕುಳಿತದ್ದನ್ನು ನೋಡಿಯಂತೂ ಕಕ್ಕಾವಿಕ್ಕಿಯಾಗಿರಲು, ಯುರೋಪಿಯನ್ ಸ್ತ್ರೀಯು ಎದ್ದು ಕಮಲಾಬಾಯಿಯ ಕೈಹಿಡಿದು ಕೊಂಡು:—ತಂಗೀ, ಇದೆಲ್ಲವನ್ನು ನೋಡಿ, ನೀನು ಬೆರಗಾದೆಯಾ? ಜಜ್ಜ

ಸಾಹೇಬರು ನಿನಗೆ ಪರಕೀಯರಲ್ಲ; ಪ್ರತ್ಯಕ್ಷ ನಿನ್ನ ಪತಿಯು. ತಿಳಿಯಿತೇ? ಎಂದು ನುಡಿದು, ಪ್ರೀತಿಯಿಂದ ತನ್ನ ಹತ್ತರ ಕುಳ್ಳಿರಿಸಿಕೊಂಡಳು. "ಪತಿಯು" ಎಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ ಅವಳ ಚನ್ನಿಗಮೊಗವು ಲಜ್ಜೆಯಿಂದ ಬಾಗಿಹೋಯಿತು, ಹೃದಯದಲ್ಲಿ ಉಲ್ಲಾಸವು ಉಕ್ಕುತ್ತಿರಲು, ನಡುನಡುವೆ ತನ್ನ ಪ್ರಿಯಪತಿಯ ಮುಖವನ್ನು ಕದ್ದು ನೋಡತೊಡಗಿದಳು.

ಎಲ್ಲ ಜನರೂ ಚಿತ್ರದ ಗೊಂಬೆಗಳಂತೆ ಸ್ತಬ್ಧರಾಗಿ ಕುಳಿತಿರಲು, ಜಜ್ಜ ಸಾಹೇಬರು ಮತ್ತೆ ಎದ್ದು ನಿಂತು:—ಸದ್ಗೃಹಸ್ಥರೇ, ನನ್ನ ಆತ್ಮ ವೃತ್ತವನ್ನು ಕೇಳುವ ಇಚ್ಛೆಯು ನಿಮ್ಮೆಲ್ಲರಿಗೆ ಆಗಿರಬಹುದು. ಅದನ್ನಿಷ್ಟು ಸಂಕ್ಷಿಪ್ತವಾಗಿ ಹೇಳುತ್ತೇನೆ, ಕೇಳಿರಿ. ನಾನು ಹನ್ನೆರಡು ವರ್ಷಗಳ ಹಿಂದೆ ಇದೇ ವಿನಾಯಕನ ಉಪದ್ರವಕ್ಕೆ ಬೇಸತ್ತು ಮನೆಬಿಟ್ಟು ಹೋದದ್ದು ನಿಮ್ಮೆಲ್ಲರಿಗೆ ಗೊತ್ತಿರಬಹುದು. ಮನೆಯಿಂದ ಹೊರಬಿದ್ದ ಕೂಡಲೆ ನಾನು ಸಂನ್ಯಾಸಿಯ ವೇಷದಿಂದ ಮುಂಬಯಿಗೆ ಹೋಗಿ, ಭಿಕ್ಷೆಯಿಂದ ವಿದ್ಯೆ ಕಲಿಯಹತ್ತಿದೆನು. ಹೀಗೆಯೇ ವಿದ್ಯೆಕಲಿಯುತ್ತ ಎಮ್, ಎ. ಪರೀಕ್ಷೆಯಲ್ಲಿ ೧ನೇ ನಂಬರ ತೇರ್ಗಡೆ ಹೊಂದಲು, ಈ ಮಹಾತ್ಮರು ಆಗ ನಮಗೆ ಬಕ್ಷೀಸ ಕೊಡಲಿಕ್ಕೆ ಅಕಸ್ಮಾತ್ ನಮ್ಮ ಕಾಲೇಜಕ್ಕೆ ಬಂದರು. ಹಿಂದೂ ಜನರಿಗೆ ಹಿತಮಾಡಿದವರಲ್ಲಿ ಅಗ್ರೇಸರರಾದ ಜಾನ್‌ಸಾಹೇಬ ಕಲೆಕ್ಟರರೆಂದರೆ, ಇವರೇ; ನನ್ನ ಎಲ್ಲ ಚರಿತ್ರವನ್ನೂ ಇವರು ಏಕಾಂತದಲ್ಲಿ ತಿಳಿದುಕೊಂಡು, ತಮ್ಮ ಆಶ್ರಯದಲ್ಲಿ ನನ್ನನ್ನು ಇಟ್ಟುಕೊಂಡರು. ಮುಂದೆ ವಿಲಾಯತಿಯಲ್ಲಿಯೂ ಇವರ ಉದಾರಾಶ್ರಯದಿಂದಲೇ ವಿದ್ಯೆ ಕಲಿತು, ಆರುತಿಂಗಳ ಹಿಂದೆ ಮುಂಬಯಿಗೆ ಜಜ್ಜನಾಗಿ ಬಂದೆನು. ಜಜ್ಜನಾದ ನಾಲ್ಕುತಿಂಗಳ ಮೇಲೆ ಹಿಂದುಸಾವಿರ ರೂಪಾಯಿಗಳನ್ನು ಮುರಲೀಧರನ ಹೆಸರಿನಿಂದ ಮನಿಆರ್ಡರ ಮಾಡಿ ಕಳಿಸಿರಲು, ಅವನ್ನೇ ವಿನಾಯಕನು ಈ ಹವಾಲದಾರನ ಸಹಾಯದಿಂದ ನನ್ನವೆಂದು ಸುಳ್ಳುಹೇಳಿ ಎತ್ತಿಕೊಂಡು ಹೋಗಿರುವನು. ಅಷ್ಟರಲ್ಲಿ ನನ್ನನ್ನು ಇದೇ ಜಿಲ್ಲೆಗೆ ವರ್ಗ ಮಾಡಿದೆಯೆಂದು ವರಿಷ್ಠರಿಂದ ಅಪ್ಪಣೆಯು ಬಂದಿತು. ಹಿಂದು ದಿನ ನಾನು ಇಲ್ಲಿಗೆ ಬರಿಗೈಯಿಂದ ಹ್ಯಾಗೆ ಬರಲೆಂದು ಯೋಚಿಸುತ್ತ ಕುಳಿತಿರಲು, ಭಾಷಾಂತರ ಪತ್ರದೊಳಗಿನ ಈ ಖಟ್ಲೆಯ ಸಂಬಂಧದ ಲೇಖವು ನನ್ನ ದೃಷ್ಟಿಗೆ ಬಿದ್ದಿತು. ಕೂಡಲೆ ಎಲ್ಲ ಸಂಗತಿಗಳನ್ನೂ ಈ ನನ್ನ ಸಾಕು ತಂದೆ-ತಾಯಿಗಳಿಗೆ ತಿಳಿಸಲು, ಇವರೂ ನನ್ನ ಸಂಗಡ ಹೊರಟು ಬಂದರು.

ಮುಂದಿನ ಎಲ್ಲ ಸಂಗತಿಯನ್ನಂತೂ ನಿಮಗೆ ಮೊದಲೇ ತಿಳಿಸಿದೆ, ಎಂದು ನುಡಿದು, ತಾವು ಸಾವಿರ ರೂಪಾಯಿಗಳನ್ನು ಕಳಿಸಿದ ಮನಿಆರ್ಡರ ಪಾವತಿಯನ್ನು ಮ್ಯಾಜಿಸ್ಟ್ರೇಟರ ಕಡೆಗೆ ಕೊಟ್ಟು ಕುಳಿತುಕೊಂಡರು.

ಆ ಮೇಲೆ ಕುಳಿಂದಸ್ವಾಮಿ-ವಿನಾಯಕರನ್ನು ಸೆರೆಮನೆಗೆ ಕಳಿಸಿ, ಪಾನ-ಸುಪಾರಿಯ ಕೆಲಸಕ್ಕೆ ಪ್ರಾರಂಭಿಸಿದರು. ಮ್ಯಾಜಿಸ್ಟ್ರೇಟಸಾಹೇಬರು ತಮ್ಮ ಭಾಷಣದಲ್ಲಿ ಜಜ್ಜಸಾಹೇಬರ ಜಾಣತನವನ್ನೂ ಪೆನ್‌ಶನ್ ಕಲೆಕ್ಟರರ ಪರೋಪಕಾರ ಗುಣವನ್ನೂ ಸೀತಾಬಾಯಿಯ ಪುತ್ರವಾತ್ಸಲ್ಯವನ್ನೂ ಯಥಾಪ್ರಕಾರವಾಗಿ ವರ್ಣಿಸಿದರು. ಆ ಮೇಲೆ ಪೋಲೀಸ ಸಬ್ ಇನಸ್ಪೆಕ್ಟರರು ತಮ್ಮ ತಪ್ಪಿಗಾಗಿ ಜಜ್ಜಸಾಹೇಬರಲ್ಲಿ ಕ್ಷಮೆಬೇಡಿಕೊಂಡು, ಮುರಲೀಧರ, ಕಮಲಾಬಾಯಿ, ಮಕರಂದರನ್ನು ಸಂತೈಸಿದರು. ಕಟ್ಟೆ ಕಡೆಗೆ ಕೂಡಿದ ಎಲ್ಲ ನೌಕರದಾರರು "ಇವತ್ತಿನಿಂದ ನಾವು ಸತ್ಯತನದಿಂದ ವರ್ತಿಸುವೆವೆ"ಂದು ಪ್ರತಿಜ್ಞೆ ಮಾಡಿದರು. ಬಳಿಕ ಸಭಾವಿಸರ್ಜನೆಯಾಯಿತು. ಜಜ್ಜಸಾಹೇಬರು ತಮ್ಮ ಪರಿವಾರದೊಡನೆ ಮೋಟಾರಿನಲ್ಲಿ ಕುಳಿತು ಮನೆಗೆ ನಡೆದರು.

---

## ಉಪಸಂಹಾರ.



ಆ ದಿನ ಮುರಲೀಧರನ ಮನೆಯು ಬರ-ಹೋಗುವ ಜನರ ಗದ್ದಲದಿಂದ ತುಂಬಿಹೋಗಿತ್ತು. ಪ್ರತಿಯೊಬ್ಬರ ಮುಖದಲ್ಲಿ ಉಲ್ಲಾಸವು ಉಕ್ಕುತ್ತಿತ್ತು. ಸೀತಮ್ಮ ಕಮಲಾಬಾಯಿಯರ ಸಂಭ್ರಮವನ್ನಂತೂ ಹೇಳತೀರದು. ಧಾರವಾಡದೊಳಗಿನ ಎಲ್ಲ ಪ್ರಮುಖ ಜನರೂ ರಜನೀಕಾಂತರನ್ನು ಕಂಡು ಅಭಿನಂದಿಸಿ ಹೋಗುತ್ತಿದ್ದರು. ಮಹಾದೇವಪ್ಪನವರು ಕಮಲಾಬಾಯಿಯ ಪ್ರಖರತರ ಪಾತಿವ್ರತ್ಯವನ್ನು ವರ್ಣಿಸಿ, ಹವಾಲದಾರನು ಅಂದಿನ ರಾತ್ರಿ ನಡಿಸಿದ ನೀಚತನವನ್ನೂ, ತಾವು ಆಗ ದೂರದಲ್ಲಿದ್ದು ತೋರಿಸಿದ ಪ್ರಸಂಗಾವಧಾನವನ್ನೂ ಹೇಳಿ, ರಜನೀಕಾಂತನಲ್ಲಿ ಕಮಲಾಬಾಯಿಯ ವಿಷಯವಾಗಿ ಆದರವನ್ನು ಹೆಚ್ಚಿಸಿದರು. ಅಂದಿನ ರಾತ್ರಿಯು ಸಂಭ್ರಮದಲ್ಲಿಯೇ ಕಳೆದುಹೋಯಿತು.

ಮರುದಿನ ಮಧ್ಯಾಹ್ನದ ಮೂರುಗಂಟೆಗೆ ಜಜ್ಜ ಸಾಹೇಬರು ಬೆಂಚ ಕೋರ್ಟಿಗೆ ಹೋದರು. ಅಷ್ಟರಲ್ಲಿ ಮ್ಯಾಜಿಸ್ಟ್ರೇಟರು ವಿನಾಯಕನನ್ನೂ

ಕುಳಿಂದಸ್ವಾಮಿಯನ್ನೂ ಕರೆತರಿಸಿದ್ದರು. ಅವರು ಪೂರ್ಣ ಅಪರಾಧಿಗಳೆಂದು ನಿರ್ಣಯವಾಗಿ ಹೋಗಿತ್ತು. ಆಗ ಮ್ಯಾಜಿಸ್ಟ್ರೇಟರು ಜಜ್ಜಸಾಹೇಬರ ಅನುಮತಿಯಿಂದ ಕುಳಿಂದನಿಗೆ ೫ ವರುಷಗಳ ಸಶ್ರಮ ಶಿಕ್ಷೆಯನ್ನೂ ವಿನಾಯಕನಿಗೆ ೬ ತಿಂಗಳ ಸಾದಾ ಶಿಕ್ಷೆಯನ್ನೂ ವಿಧಿಸಿದರು. ಪಾಪಿಯಾದ ವಿನಾಯಕನು ತನ್ನ ಕೃತಕರ್ಮಕ್ಕೆ ಪಶ್ಚಾತ್ತಾಪಗೊಂಡು ಜೇಲಿಗೆ ಹೋಗುವಾಗ ತಾಯಿಯ ಚರಣಗಳನ್ನು ದುಃಖಾಶ್ರುಗಳಿಂದ ತೋಯಿಸಿ, ಶೋಕಿಸುತ್ತಿರುವ ತಾಯಿಯನ್ನು ಸಂತೈಸಿದನು.

ಉದಾರ ಹೃದಯರಾದ ಪೆನ್‌ಶನ್ ಕಲೆಕ್ಟರ ಜಾನ್ ಸಾಹೇಬರು ತಾವು ಮುಂಬಯಿಯ ಒಂದು ಬ್ಯಾಂಕಿನಲ್ಲಿಟ್ಟದ್ದ ಐದು ಲಕ್ಷ ರೂಪಾಯಿಗಳ ಚೆಕ್ಕನ್ನು ಪ್ರೇಮಪುರಸ್ಸರವಾಗಿ ರಜನೀಕಾಂತರಾಯರಿಗೆ ಒಪ್ಪಿಸಿ, ತಮ್ಮ ದೇಶಕ್ಕೆ ತೆರಳಿದರು! ರಂಗರಾಯರಿಗೆ ಕಮಲಾಬಾಯಿಯ ಹೊರ್ತಾಗಿ ಮಕ್ಕಳಾರೂ ಇಲ್ಲದ್ದರಿಂದಲೂ, ತಾವು ವೃದ್ಧರಾಗಿದ್ದರಿಂದಲೂ ತಮ್ಮ ವಿಪುಲ ಆಸ್ತಿಯನ್ನು ಮಗಳಿಗೆ ಒಪ್ಪಿಸಿ, ಸಂತೋಷದಿಂದ ಸೀತಾಬಾಯಿಯೊಂದಿಗೆ ತೀರ್ಥಯಾತ್ರೆಗೆ ನಡೆದರು. ವಿನಾಯಕನಿಗೆ ಶಿಕ್ಷೆಯಾದ ದಿವಸವೇ ನೀಲಗಂಗಾಬಾಯಿಯು ಕೈಗೆ ಸಿಕ್ಕಷ್ಟು ಗಂಟನ್ನು ಎತ್ತಿಕೊಂಡು ತವರು ಮನೆಗೆ ಪಲಾಯನ ಹೇಳಿಸಿದಳು. ರಜನೀಕಾಂತರಾಯರು ಅವಳ ಗೊಡವೆಗೆ ಹೋಗದೆ, ತಮ್ಮ ಮೊದಲಿನ ಭವ್ಯ ಮನೆಯಲ್ಲಿರಹತ್ತಿದರು. ಅವರು ತಮ್ಮ ಮನೆತನಕ್ಕೆ ಆಪ್ತನೆಂತಿದ್ದ ಮಹಾದೇವಪ್ಪನನ್ನು ಎಂದೂ ಮರೆಯಲಿಲ್ಲ.

ವಿನಾಯಕನು ಶಿಕ್ಷೆಯನ್ನನುಭವಿಸಿ, ನಿರ್ಮಲ ಮನಸ್ಕನಾಗಿ ಬರಲು ರಜನೀಕಾಂತರಾಯರು ತಾಯಿಯ ಅಪ್ಪಣೆಯ ಪ್ರಕಾರ ಅವನಿಗೆ ಮತ್ತೊಂದು ಲಗ್ನವನ್ನು ಮಾಡಿ, ತಮ್ಮ ಹತ್ತರವೇ ಇಟ್ಟುಕೊಂಡರು. ವಿನಾಯಕರಾಯನಾದರೂ ತನ್ನ ದುರ್ಗುಣಗಳನ್ನೆಲ್ಲ ಬಿಟ್ಟು, ಅಣ್ಣನ ದಾಸಾನುದಾಸನಾಗಿ ಇರಹತ್ತಿದನು! ಕಮಲಾಬಾಯಿಯು ಹನ್ನೆರಡು ವರ್ಷಗಳ ವರೆಗೆ ತಪಸ್ಸನ್ನೆಸಗಿದ ಪರಿಶುದ್ಧವಾದ ಶರೀರವನ್ನು ಪತಿಸೇವೆಯಲ್ಲಿ ತೊಡಗಿಸಿ, ತನ್ನ ಸದ್ಗುಣ ವಿಶೇಷದಿಂದ ಪತಿಯ ಪ್ರೇಮಕ್ಕೆ ಪಾತ್ರಳಾಗಿ ಅಪಾರ ಸೌಖ್ಯವನ್ನನುಭವಿಸಿದಳೆಂಬದನ್ನು ಬರೆಯುವ ಕಾರಣವಿಲ್ಲ.

—ಸಂಪೂರ್ಣ.—

|| ಶ್ರೀ ಶೇಷಾಚಲ ಸದ್ಗುರು ಪ್ರಸನ್ನ ||

# ಶ್ರೀ ಶೇಷಾಚಲ ಗ್ರಂಥಮಾಲೆ,

ಪೋ|| ಆನಂದವನ, ಜಿ|| ಧಾರವಾಡ.

# ಕ್ಯಾಟಲಾಗ್ ನಂ. ೨೨೮

# 1929

## ನಿಯಮಗಳು.

(೧) ಯಾವಾಗಲೂ ರೋಖ ವ್ಯವಹಾರ ಮಾಡಲಾಗುವದು. ಸಂಜಾಯತ ಕರಾರಿನಿಂದಾಗಲಿ, ಉದ್ರಿಯಿಂದಾಗಲಿ ಯಾರಿಗೂ ಪುಸ್ತಕಗಳು ಸಿಗಲಾರವು. (೨) ಒಮ್ಮೆ ತರಿಸಿಕೊಂಡ ಪುಸ್ತಕಗಳನ್ನು ಯೋಗ್ಯಕಾರಣದ ಹೊರತು ತಿರುಗಿ ತೆಗೆದುಕೊಳ್ಳುವದಿಲ್ಲ. (೩) ಒಂದು ರೂಪಾಯಿಗಿಂತ ಕಡಿಮೆ ಬೆಲೆಗೆ ವ್ಹಿ. ಪಿ. ಕಳಿಸಲಾಗುವದಿಲ್ಲ. (೪) ೧ ರೂಗಿಂತ ಕಡಿಮೆ ಬೆಲೆಯ ಪುಸ್ತಕಗಳಿಗಾಗಿ ಅವುಗಳ ಬೆಲೆ ಹಾಗು ಪೋಸ್ಟೇಜ ಒಂದು ಆಣೆ ಹೀಗೆ ಒಟ್ಟು ಪೋಸ್ಟಿನ ತಿಕೀಟುಗಳನ್ನು ಕಳಿಸಿದರೆ ಅಪೇಕ್ಷಿತ ಬುಕ್ಕುಗಳನ್ನು ಬುಕ್‌ಪೋಸ್ಟಿನಿಂದ ಕಳಿಸಲಾಗುವದು. (೫) ಹತ್ತು ರೂಪಾಯಿಗಳ ಅಥವಾ ಅದಕ್ಕೂ ಹೆಚ್ಚು ಬೆಲೆಯ ಪುಸ್ತಕಗಳಿಗೆ ಬರೆಯುವವರು ಅರ್ಧ ಹಣವನ್ನು ಮುಂಗಡ ಕಳಿಸಿ ಬರೆಯತಕ್ಕದ್ದು.

## ಕಮಿಶನ್ ದರಗಳು.

(೧) ಮೂರು ರೂಪಾಯಿಗಿಂತ ಕಡಿಮೆ ಬೆಲೆಯ ಪುಸ್ತಕಗಳಿಗೆ ಕಮಿಶನ್ ಸಿಗುವದಿಲ್ಲ.

| | | | |
|---|---|---|---|
| (೨) | ೩ ರೂ. ಗಳಿಂದ ೫ ರೂ. ಗಳ ವರೆಗೆ | ೧ ರೂ ಗೆ | ೧ ಆಣೆಯಂತೆ. |
| (೩) | ೬ ರೂ. ಗಳಿಂದ ೧೦ ರೂ. ಗಳ ವರೆಗೆ | ೧ ರೂ ಗೆ | ೨ ಆಣೆಯಂತೆ. |
| (೪) | ೧೧ ರೂ. ಗಳಿಂದ ೨೫ ರೂ. ,, | ೧ ರೂ ಗೆ | ೩ ಆಣೆಯಂತೆ |
| (೫) | ೨೬ ರೂ. ಗಳಿಂದ ೫೦ ರೂ. ,, | ೧ ರೂ ಗೆ | ೪ ಆಣೆಯಂತೆ |

ಇದಕ್ಕೂ ಹೆಚ್ಚು ಬೆಲೆಯ ಪುಸ್ತಕಗಳನ್ನು ತರಿಸುವವರಿಗೂ ಬುಕ್‌ಸೇಲರರಿಗೂ ಧಾರಾಳವಾದ ಕಮಿಶನ್ ಕೊಡಲಾಗುವದು.

ಧಿ. ಪ. ಕಾಳೆ,

# ನಮ್ಮಲ್ಲಿ ಸಿಗುವ ಪುಸ್ತಕಗಳು.

## ೧ ಐತಿಹಾಸಿಕ ಕಾದಂಬರಿಗಳು.

೧ ಶಕ್ತಿಮಯೀ ೧ರೂ
೨ ವಡಗಾಂವದ ವಿಜಯ ೧|ರೂ
೩ ಮರಾಟರ ಅವನತಿ ೧೪ಆ
೪ ಸಂಕ್ರಮಣ ೮ಆ
೫ ಕನ್ನಡಿಗರ ಕಾರಸ್ಥಾನ(೨ನೆಆ) ೧೦ಆ
೬ ಕೃಷ್ಣಾಕುಮಾರಿ ೧ರೂ
೭ ಚಿಮಣಾಜೀಅಪ್ಪಾ ೧ರೂ ೨ತ
೮ ದೈವಸಂಕಲ್ಪ ೧೪ಆ
೯ ದೈವತಂತ್ರ ೪ಆ
೧೦ ಗುರುಗೋವಿಂದಸಿಂಹ ೧೨ಆ
೧೧ ನರವೀರ ಕಾಸೀಮ ೧|ರೂ
೧೨ ವೀರಕಾಂತಾ ೧೨ಆ
೧೩ ಜಕಣಾಚಾರ್ಯ ೧೪ಆ
೧೪ ಕಂಕಣಚೋರ ೧|ರೂ
೧೫ ಆನಂದಸಾಮ್ರಾಜ್ಯ ೧೦ಆ
೧೬ ರಾಜದಂಡ ೧ರೂ
೧೭ ಸೂರ್ಯಗ್ರಹಣ ೧ರೂ
೧೮ ಹಿಂದೂ-ಮುಸಲ್ಮಾನರ ಐಕ್ಯ ೪ಆ

## ೨ ಸಾಮಾಜಿಕ ಕಾದಂಬರಿಗಳು.

೧ ಸಂನ್ಯಾಸಿ ೧೦ತ
೨ ಸೌಭಾಗ್ಯತಿಲಕ ೧ರೂ
೩ ಸದ್ಗುಣಿಕಮಲಾ(ಅಚ್ಚಿನಲ್ಲಿದೆ) ೧ರೂ
೪ ಬಂಧುಪ್ರೇಮ ೧೦ಆ
೫ ಸತೀಸಾಹಸ ೪ಆ
೬ ರಾಜನಂದಿನಿ ೮ಆ
೭ ಪ್ರೇಮಯಜ್ಞ ೮ಆ
೮ ಗೃಹಲೀಲೆ ೧೨ಆ
೯ ಎರಡನೇ ಹೆಂಡತಿ ೮ಆ
೧೦ ಕೈಗಡದ ಸೊಸೆ ೧೦ಆ
೧೧ ನೀಚ ಇನಾಮದಾರ ೧೨ಆ
೧೨ ಜಯ-ಪರಾಜಯ! ೧೨ಆ
೧೩ ವಿಲಕ್ಷಣ ಪತಿಸೇವೆ ೪ಆ
೧೪ ವಿಷಕುಂಭ ೪ಆ
೧೫ ಮನೋರಮಾ ೧೪ಆ

## ೩ ಡಿಟೆಕ್ಟಿವ್ಹ ಕಾದಂಬರಿಗಳು.

೧ ಅಂಬಿಕೆ ೧ರೂ ೪ಆ
೨ ವಿಚಿತ್ರಚಟ (೨ನೇಆವೃತ್ತಿ) ೮ತ
೩ ಇಂದುಮುಖಿ ,, ೧೦ಆ
೪ ಕಳ್ಳನಿಗೆ ಕಾಣಿಕೆ ೮ಆ
೫ ಭಗವಾನದಾಸ ೧ರೂ
೬ ನಿಗೂಢ ಕೊಲೆ! ೮ಆ
೭ ಭಯಂಕರ ಕೊಲೆ ೧೨ಆ
೮ ಘಾತುಕ ಶಿತಿಕಂಠ ೧೦ಆ
೯ ಪತ್ತೇದಾರ ನರಸಿಂಗರಾಯ ೪ಆ

## ೪ ಪೌರಾಣಿಕ ಕಾದಂಬರಿಗಳು.

೧ ಪರಶುರಾಮಪರಾಜಯ ೪ಆ
೨ ಅಂಗದನ ಫಿರ್ಯಾದು ೪ಆ
೩ ಈಶಪ್ರಸಾದ ೪ಆ

## ೫ ಚರಿತ್ರಗಳು.

೧ ಸ್ವಾಮೀ ಶ್ರದ್ಧಾನಂದ ೧೨ಆ
೨ ಶ್ರೀ ಬ್ರ ಚೈ. ಮಹಾರಾಜರು ೧೨ಆ

೩ ಶ್ರೀ ಶೇಷಾಚಲಸಾಧುಗಳು ೧ರೂ
೪ ಶ್ರೀ ಮಡಿವಾಳಪ್ಪನವರು ೬ಆ
೫ ಶ್ರೀಅಕ್ಕಲಕೋಟಸ್ವಾಮಿಗಳು ೮ಆ
೬ ಸಂತ-ತುಕಾರಾಮ ೧ರೂ
೭ ಶ್ರೀ ಚಿದಂಬರವಿಜಯ ೧-೧೨-೦
೮ ಶ್ರೀ ಮಾಣಿಕ ಪ್ರಭುಗಳು ೮ಆ
೯ ಕ. ಸ. ಮಂಡಲ ಭಾಗ ೧-೨ ೯ಆ
೧೦ ಶ್ರೀ ಜ. ಸು. ಆಚಾರ್ಯರು ೧೨ಆ
೧೧ ಶ್ರೀ ಯಾಜ್ಞವಲ್ಕ್ಯವಿಜಯ ೧೪ಆ
೧೨ ಶ್ರೀ ರಾಘವೇಂದ್ರಕಥಾಮೃತ ೬ಆ
೧೩ ಶ್ರೀ ಗಿರಿಯಮ್ಮನ ಚರಿತ್ರೆ ೮ಆ
೧೪ ಶ್ರೀ ಮೀರಾಬಾಯಿ ೪ಆ
೧೫ ಶ್ರೀ ಶಂಕರಭಗವಾನರಚರಿತ್ರೆ ೪ಆ
೧೬ ಶ್ರೀ ಸ. ರಾಮದಾಸರು ೧ರೂ ೨ಆ
೧೭ ಶ್ರೀ ಸತ್ಯಸಂಧ ಚರಿತ್ರೆ ೧೦ಃ
೧೮ ಶ್ರೀ ಶೇಷಾಚಲ ಲಘುಚರಿತ್ರ ೪ಆ

**೬ ನಾಟಕಗಳು.**

೧ ವಿವೇಕೋದಯ ೮ಆ
೨ ಪ್ರೇಮಲೀಲಾ ೧ರೂ
೩ ಪ್ರೇಮಪರಿವರ್ತನ ೧೨ಆ

**೭ ಪೌರಾಣಿಕ-ಪಾರಮಾರ್ಥಿಕ.**

೧ ಶ್ರೀ ಅಧ್ಯಾತ್ಮರಾಮಾಯಣ ೧||ರೂ
೨ ಶ್ರೀ ಆನಂದರಾಮಾಯಣ ೧||ರೂ
೩ ಶ್ರೀ ಶಿವಲೀಲಾಮೃತ ೭ಆ
೪ ಶ್ರೀರೇಣುಕಾಮಾಹಾತ್ಮ್ಯ ೫ಆ
೫ ಶ್ರೀ ಬನಶಂಕರೀಮಾಹಾತ್ಮ್ಯ ೮ಆ
೬ ಭಕ್ತಿವಿಜಯ ೧||ರೂ
೭ ಹಂಸಗೀತೆ ೬ಆ
೮ ಶ್ರೀವೆಂಕಟೇಶಮಾಹಾತ್ಮ್ಯ ೧ರೂ
೯ ಶ್ರೀ ನವನಾಥಭಕ್ತಿಸಾರ ೨||ರೂ
೧೦ ಏಕನಾಥೀ ಅವಧೂತಗೀತೆ ೧ರೂ
೧೧ ಶ್ರೀ ದಾಸಬೋಧ ೧ರಿಂದ ೬ಭಾಗ ಸಂಪೂರ್ಣ } ೫ರೂ ೧೪ಆ
೧೨ ಮಡಿ-ಮೈಲಿಗೆಗಳ ಗುಟ್ಟು ೫ಆ
೧೩ ಮಿತ್ರದುಃಖ (೨ನೇ ಆವೃತ್ತಿ) ೪ಆ
೧೪ ಪ್ರಗತಿ-ದಾಸ್ಯವಿಮೋಚನ ೬ಆ
೧೫ ಶ್ರೀಶೇಷಾಚಲಬೋಧಾಮೃತ೧ರೂ
೧೬ ಕ. ದೇವತೆಗಳ ಆಗಮನ ೧೦ಆ
೧೭ ಪ್ರಪಂಚದರ್ಪಣ ೧-೨ಭಾಗ ೧ರೂ
೧೮ ಸಂಸಾರ ಕರ್ತವ್ಯ ೧೨ಆ
೧೯ ಈಶಾವಾಸ್ಯೋಪನಿಷತ್ ೧೦ಆ
೨೦ ಭಕ್ತಾನಂದಲಹರಿ ೨ಆ
೨೧ ಶ್ರೀ ಶೇಷಾಚಲಭಜನಸಂಗ್ರಹ ೪ಆ

**೮ ಧಾರ್ಮಿಕ ಹಾಗು ಇತರ.**

೧ ಲೋಕಮಾನ್ಯ ಕಥಾ ೮ಆ
೨ ಹಿಂದುಗಳುಬಲಿಷ್ಠರಾಗುವದೆಂತು೮ಆ
೩ ಶು. ಯು. ಕಣ್ವಸಂಹಿತೆ ೩ರೂ.
೪ ಕಾಣ್ವ ತ್ರಿಕಾಲ ಸಂಧ್ಯಾ ೨ಆ
೫ ಋಗ್ವೇದಿ ತ್ರಿಕಾಲ ಸಂಧ್ಯಾ ೨ಆ
೬ ಕಾಣ್ವ ನಿತ್ಯವಿಧಿ ೮ಆ
೭ ಶ್ರಾದ್ಧಮಾರ್ತಂಡ ೧ರೂ
೮ ಉಪಾಕರ್ಮ ೧೦ಆ
೯ ಆಚಾರಮಾರ್ತಂಡ ೧ರೂ
೧೦ ಶಾಂತಿಮಾರ್ತಂಡಭಾ.೧-೨ ೨ರೂ
೧೧ ಧರ್ಮಸಿಂಧು ೧ನೇಭಾಗ ೧ರೂ
೧೨ ಶ್ರೀ ಮಲ್ಹಾರಿ ಕೀರ್ತನ ೫ಆ
೧೩ ಹಾದಿಗನಹರಟೆ ಭ.ಭ. ಬಯಕೆ ೩ಆ
೧೪ ಕನ್ನಡ ಶಿವಾನಂದಲಹರಿ ೨ಆ

ವಿಳಾಸ:—ಭಿ. ಪ. ಕಾಳೆ, ಪೋ|| ಆನಂದವನ, ಜಿ|| ಧಾರವಾಡ.

# ಬೇರೆ ಬೇರೆ ಗ್ರಂಥಕರ್ತರಿಂದ ಬರೆಯಲ್ಪಟ್ಟ ಗ್ರಂಥಗಳು.

೧ ಕೈ. ವಾ. ಶ್ರೀಕಂಠಶಾಸ್ತ್ರಿಗಳು:--೧ ಶ್ರೀಮದಾನಂದರಾಮಾಯಣ, ೨ ಶ್ರೀ ಅಧ್ಯಾತ್ಮರಾಮಾಯಣ, ೩ ಶ್ರೀಮದ್ಭಾಗವತ ೪ ಸತಿಸಾಹಸ. ಇತ್ಯಾದಿ.

೨ ಯಲಿಶ್ಲೀ ಗುಡ್ಡೋ ಕುಲಕರ್ಣಿ, ಸಂಪಾದಕ, ಸದ್ಬೋಧ ಚಂದ್ರಿಕೆ ಆನಂದವನ:—೧ ಶ್ರೀಮತ್ ದಾಸಬೋಧ, ೨ ಶ್ರೀ ಶೇಷಾಚಲ ಸಾಧುಗಳವರ ಚರಿತ್ರೆ, ೩ ಶ್ರೀ ಶೇಷಾಚಲಬೋಧಾಮೃತಸಾರ, ೪ ಶ್ರೀ ಯಾಜ್ಞವಲ್ಕ್ಯ ವಿಜಯ, ೫ ಈಶಾವಾಸ್ಯೋಪನಿಷತ್, ೬ ಶ್ರೀ ಬನಶಂಕರೀ ಮಾಹಾತ್ಮ್ಯ, ೭ ಶ್ರೀ ರೇಣುಕಾ ಮಾಹಾತ್ಮ್ಯ, ೮ ಶ್ರೀ ಮಲ್ಲಾರಿ ಮಾಹಾತ್ಮ್ಯ, ೯ ಏಕನಾಥಿ ಅವಧೂತಗೀತೆ, ೧೦ ಹಂಸಗೀತೆ, ೧೧ ಶ್ರೀ ದಿನಕರರಾಮದಾಸರು. ಇತ್ಯಾದಿ.

೩ ಕೈ. ವಾ. ರಾಮಚಂದ್ರ ತ್ರ್ಯಂಬಕ ಕರ್ಪೂರ:—೧ ಕನ್ನಡಿಗರ ಕಾರಸ್ಥಾನ, ೨ ಚಿಮಣಾಜಿ ಅಪ್ಪಾ, ೩ ದೈವತಂತ್ರ, ೪ ಮರಾಟರ ಅವನತಿ, ೫ ರಾಜದಂಡ, ೬ ಸಂಕ್ರಮಣ, ೭ ಕೈಗಡದ ಸೊಸೆ, ೮ ವಿಷಕುಂಭ, ೯ ಸಂನ್ಯಾಸಿ, ೧೦ ಈಶಪ್ರಸಾದ, ೧೧ ಪರಶುರಾಮ ಪರಾಜಯ, ೧೨ ಶ್ರೀ ಅಕ್ಕಲಕೋಟೀ ಮಹಾರಾಜರ ಚರಿತ್ರೆ, ೧೩ ಶ್ರೀ ಮಡಿವಾಳಪ್ಪನವರು, ೧೪ ಶ್ರೀ ಮಾಣಿಕ ಪ್ರಭುಗಳು, ೧೫ ಶ್ರೀ ಬ್ರಹ್ಮಚೈತನ್ಯ ಮಹಾರಾಜರು, ೧೬ ಶ್ರೀ ಸಂತ-ತುಕಾರಾಮ, ೧೭ ಶ್ರೀ ಸಮರ್ಥ ರಾಮದಾಸರು, ೧೮ ಲೋಕಮಾನ್ಯ ಕಥಾ, ೧೯ ವಿವೇಕೋದಯ, ೨೦ ಶಿವಲೀಲಾಮೃತ. ಇತ್ಯಾದಿ.

೪ ಭಿ. ಪ. ಕಾಳೆ, ವ್ಯಾ|| ಶ್ರೀ ಶೇಷಾಚಲ ಗ್ರಂಥಮಾಲೆ ಆನಂದವನ:-೧ ಕಂಕಣ ಚೋರ, ೨ ನರವೀರ ಕಾಸಿಮ, ೩ ಶಕ್ತಿಮಯಿ, ೪ ಹಿಂದೂ-ಮುಸಲ್ಮಾನರ ಐಕ್ಯ, ೫ ವಡಗಾಂವದ ವಿಜಯ, ೬ ಎರಡನೇ ಹೆಂಡತಿ, ೭ ಗ್ರಹಲೀಲೆ, ೮ ಬಂಧುಪ್ರೇಮ, ೯ ವಿಲಕ್ಷಣ ಪತಿಸೇವೆ, ೧೦ ಸೌಭಾಗ್ಯ ತಿಲಕ, ೧೧ ಅಂಬಿಕೆ, ೧೨ ಇಂದುಮುಖಿ, ೧೩ ಘಾತುಕ ಶಿತಿಕಂಠ, ೧೪ ವಿಚಿತ್ರಚಟ, ೧೫ ಭಗವಾನದಾಸ, ೧೬ ಮಿತ್ರದುಃಖ ೧೭ ಕರ್ನಾಟಕಕ್ಕೆ ದೇವತೆಗಳ ಆಗಮನ, ಇತ್ಯಾದಿ.

೫ ಶಂಕರ ಅಣ್ಣಾಜಿ ಕುಲಕರ್ಣಿ ನೂಲವಿ:—೧ ಗುರುಗೋವಿಂದಸಿಂಹ ೨ ಜಕಣಾಚಾರ್ಯ, ೩ ಜಯಪರಾಜಯ, ೪ ಸ್ವಾಮಿಶ್ರದ್ಧಾನಂದ, ೫ ಭಯಂಕರ ಕೊಲೆ, ೬ ಮಹಾತ್ಮಾ ತುಳಸೀದಾಸ. (ಅಚ್ಚಿನಲ್ಲಿದೆ) ಇತ್ಯಾದಿ.

ಈ ಎಲ್ಲ ಪುಸ್ತಕಗಳು ಸಿಗುವ ವಿಳಾಸ:—ಭಿ. ಪ. ಕಾಳೆ, ಪೋ|ಆನಂದವನ.

ಶ್ರೀ ಶೇಷಾಚಲ ಪ್ರೆಸ್ಸ ಆನಂದವನ,

ಯೆಂದು ಹೇಳಲಿಕ್ಕೆ ಯಾವ ಅಡ್ಡಿಯೂ ಇಲ್ಲದಾಗಿದೆ.

ಕಾದಂಬರಿಯ ಹೆಸರು ವಡಗಾವದ ವಿಜಯವೆಂದಿದೆ. ಇದರಿಂದ ಪ್ರಸ್ತುತಪುಸ್ತಕದಲ್ಲಿ ಕೇವಲ ಯುದ್ಧವಿಷಯಕವಾದ ನಿರಸ ವರ್ಣನೆಯೇ ಇರ ಬಹುದೆಂದು ಸಕೃದ್ದರ್ಶನದಲ್ಲಿ ಅನಿಸಬಹುದಿದೆ; ಆದರೆ ನಿಜಸ್ಥಿತಿಯು ಹೀಗಿಲ್ಲ. ಪುಸ್ತಕವು ಎಲ್ಲೆಲ್ಲಿಯೂ ರಸಭರಿತವಾಗಿದೆ. ಓದಲುಪಕ್ರಮಿಸಿದರೆ, ಮುಗಿ ಯುವ ವರೆಗೆ ಮುಂದೇನಾಯಿತೆಂಬುದನ್ನರಿವ ಕುತೂಹಲತೆಯು ಬೆಳೆಯುತ್ತ ಹೋಗುವದು. ಪೇಶ್ವೆನಾರಾಯಣರಾಯನ ಕೊಲೆಯ ಸಂಗತಿಯು ಬಹುಜನರ ಪರಿಚಿತ ವಿಷಯವಾಗಿದ್ದರೂ, ಈ ಮುಖ್ಯ ವಿಷಯಕ್ಕೆ ಪೋಷಕವಾಗಿ ಪ್ರಸ್ತುತ ಕಾದಂಬರಿಯಲ್ಲಿ ಉಲ್ಲೇಖಿಸಲ್ಪಟ್ಟ ಅನೇಕ ಸಂಗತಿಗಳು ವಾಚಕರಿಗೆ ಹೊಸವೆನಿಸ ದಿರವು; ಹಾಗು ಕಾದಂಬರಿಕಾರರು ಈ ಪೋಷಕಸಂಗತಿಗಳನ್ನು ಮನೋ ವೇಧಕ ರೀತಿಯಿಂದ ಮಂಡಿಸಿರುವದರಿಂದ ಪ್ರಸ್ತುತಕಾದಂಬರಿಯು ಚಿತ್ತರಂಜ ಕವೂ ಬೋಧಪ್ರದವೂ ಆಗಿದೆ. ವಾಚಕರು ವಾಚನವನ್ನು ಮುಂದೆ ಸಾಗಿಸಿ ದಂತೆ ಉಲ್ಲೇಖಿತಪಾತ್ರಗಳ ಭಿನ್ನ ಭಿನ್ನ ಸ್ವಭಾವಗಳ ನಿದರ್ಶನದಿಂದ ಆ ಆ ಭಾವನೆ ಗಳಲ್ಲಿ ತಲ್ಲೀನರಾಗಿ ಹೋಗುವರು. ಉದಾಹರಣಾರ್ಥವಾಗಿ ಮಾಣಿಕನ ಹುಟ್ಟಿದ ದಿನದ ಉತ್ಸವದಲ್ಲಿ ಆನಂದೀಬಾಯಿಯು ನಡಿಸಿದ ಅವ್ಯಾಪಾರೇಷು ವ್ಯಾಪಾರ ಹಾಗು ಒಳಸಂಚಿನ ರಕ್ಷಣೆಗಾಗಿ ಬಾಕೇರಾಯನು ಕೊಟ್ಟ ಆತ್ಮಬಲಿ ಮುಂತಾದ ಸಂಗತಿಗಳು ವಾಚಕರಹೃದಯವನ್ನು ತಲ್ಲಣಿಸದೆ ಬಿಡವು. ಹಾಗೆಯೆ ಕಾದಂಬರಿಯ ವಾಚನವನ್ನು ಮುಂದೆ ಸಾಗಿಸಿದರೆ, ಆನಂದೀಬಾಯಿಯ ನೀಚ-ನೀಚತರ-ನೀಚ ತಮ ಕೃತಿಗಳ ಪರಿಚಯವಾಗುತ್ತ ಹೋಗಿ, ಎಂತಹ ಕಠೋರ ಹೆಂಗಸಪ್ಪಾ ಇವಳು! ಎಂಬ ಉದ್ಗಾರವು ನಮ್ಮ ಮುಖದಿಂದ ಸಹಜವಾಗಿ ಹೊರಟು ಬಿಡುವುದು.

ಅಬಲೆಯಾಗಿದ್ದ ಆನಂದೀಬಾಯಿಯು ಸ್ವಭಾವತಃ ಕೋಮಲೆಯಾಗಿರಬೇ ಕಾಗಿತ್ತು. ಈ ದೃಷ್ಟಿಯಿಂದಕಾದಂಬರಿಕಾರರು ಒಂದೆಡೆಯಲ್ಲಿ 'ಆನಂದಿಬಾಯಿಯು ಹುಟ್ಟಾ ಕ್ರೂರಸ್ವಭಾವದವಳಾಗಿರಲಿಲ್ಲ; ಕೋಮಲ ಹಾಗು ಪ್ರೇಮಲಸ್ವಭಾವ ದವಳಾಗಿದ್ದಳು' (ಪುಟ ೧೧೭) ಎಂದು ಉಲ್ಲೇಖಿಸಿದ್ದಾರೆ; ಆದರೆ ಇವಳ ಕ್ರೂರಕೃತ್ಯಗಳು ನೀಚತೆಯಲ್ಲಿ 'ನಾನು ಮುಂದೆ ನೀನು ಮುಂದೆ' ಎಂದು ಪ್ರತಿ ಸ್ಪರ್ಧಿಸುತ್ತಿರುವ ಗಂಡಸರನ್ನು ನಾಚಿಸುವಂಥವಿವೆ! ಇದಕ್ಕೆ ಕಾದಂಬರಿಕಾರರು ಒಂದು ಬಗೆಯ ಸಮಾಧಾನ ಹೇಳಿರುವುದೇನಂದರೆ, ಆನಂದಿಬಾಯಿಯು ತನ್ನ ರಾಕ್ಷಸೀಯ ಮಹತ್ವಾಕಾಂಕ್ಷೆಯ ಸಿದ್ಧಿಗಾಗಿ ಎಂತಹ ಕಠೋರತೆಯನ್ನು ಧರಿಸ ಲಿಕ್ಕೂ ನೀಚಾಚರಣೆಮಾಡಲಿಕ್ಕೂ ಹಿಂದೆಗೆಯ್ಯಲಿಲ್ಲ. ಇದರಿಂದ ಹೆಂಗಸು ಒಮ್ಮೆ ಹಟದಿಂದ ಅಡ್ಡದಾರಿಗೆ ಬಿದ್ದರೆ ತೀರಿತು, ಅದರ ಕೊನೆಯೆಲ್ಲಿ? ಎಂಬು

ದನ್ನೂಹಿಸುವುದು ದುಸ್ತರವೆಂಬುದು ಸ್ಪಷ್ಟವಾಗುತ್ತಿದೆ.

ಪ್ರಸ್ತುತಕಾದಂಬರಿಯಲ್ಲಿ ಉಕ್ತವಾದ ಪ್ರತಿಯೊಂದು ಪಾತ್ರದ ಸ್ವಭಾವದ ಗುಣದೋಷಗಳನ್ನು ವಿವರಿಸುವುದು ನಮ್ಮ ಮನಸವಿಲ್ಲ. ಕೊನೆಯಲ್ಲಿ ನಾವು ಇನ್ನೊಂದು ಮಾತು ಹೇಳಿ, ಹನುಮನಬಾಲದಂತೆ ಬಳೆಯುತ್ತ ಬಂದಿದ್ದ ಈ ನಮ್ಮ ಬರಹವನ್ನು ಮುಗಿಸಬೇಕೆಂದಿದ್ದೇವೆ. ಈಗಳಿನ ಕನ್ನಡ ಶಾಲೆಯಲ್ಲಿ ಹಿಂದುಸ್ಥಾನದ ಇತಿಹಾಸವನ್ನು ಕಲಿಸುವ ಪ್ರಸಂಗದಲ್ಲಿ ಮಾರ್ಸಡನ್‌ಸಾಹೇಬರ ಇತಿಹಾಸವನ್ನೇ ಉಪಯೋಗಿಸುವುದು ಹೆಚ್ಚಾಗಿದೆ. ಈ ಇತಿಹಾಸದಲ್ಲಿ ಇಂಗ್ಲಿಷರ ಅಪಜಯದ ವಿಷಯಕ್ಕೆ ಎಲ್ಲೆಲ್ಲಿಯೂ ಚಕಾರ ಶಬ್ದವಿಲ್ಲ. ಎಲ್ಲಿ ನೋಡಿದರೂ ಭಾರತೀಯರ ಅಪಜಯ! ಇದರಿಂದ ವಿಧ್ಯಾರ್ಥಿಗಳ ಮನಸ್ಸಿನ ಮೇಲೆ ಉಂಟಾಗುವ ಒಂದು ಪರಿಣಾಮವು ನಮ್ಮವರ ಉನ್ನತಿಗೆ ಬಲು ವಿಘಾತುಕವಾಗಿದೆ. ಇಂಗ್ಲಿಷರು ಶೂರರು; ನಮ್ಮವರು ಹೇಡಿಗಳು. ಇಂಗ್ಲಿಷರು ವ್ಯವಸ್ಥೆಯನ್ನು ಕಾಯ್ದುಕೊಳ್ಳುವವರು; ನಮ್ಮವರು ಅವ್ಯವಸ್ಥಿತರು. ಬ್ರಿಟಿಶಸೇನಾಧಿಪತಿಯು ಅಲ್ಪಸಂಖ್ಯಾಕ ಸೈನಿಕರಿಂದ ತೀರ ವಿಪರೀತಸ್ಥಿತಿಯಲ್ಲೂ ಜಯಶಾಲಿಯಾಗುತ್ತಾನೆ; ಭಾರತೀಯ ಸೇನಾಪತಿಯು ದೊಡ್ಡಸೈನ್ಯವಿದ್ದರೂ, ಅನಕೂಲ ಪರಿಸ್ಥಿತಿಯಿದ್ದರೂ ಪರಾಜಯವನ್ನೊಪ್ಪಿಕೊಂಡು ಒಪ್ಪಂದಮಾಡಿಕೊಳ್ಳಲಿಕ್ಕೆ ಧಾವಿಸುತ್ತಾನೆ ಈ ಸಂಗತಿಗಳಿಂದ ನಾವು ಯುದ್ಧಮಾಡುವವರಲ್ಲ, ರಾಜ್ಯಕಾರಭಾರ ಸಾಗಿಸಲಿಕ್ಕೆ ಯೋಗ್ಯರಲ್ಲ ಇವೇ ಮುಂತಾದ ವಿಚಾರಗಳ ನಮ್ಮ ಬಾಲಕರಲ್ಲಿ ಉಂಟಾಗುವುದು ಸ್ವಾಭಾವಿಕವಾಗಿದೆ. ಇದು ನಮ್ಮ ದೇಶದ ಉನ್ನತಿಗೆ ಭಯಂಕರ ಹಾನಿಕಾರಕವೆಂಬುದನ್ನು ಹೇಳಲಿಕ್ಕೆಬೇಡ. ಪ್ರಸ್ತುತಕಾದಂಬರಿಗಳಂತಹ ಪುಸ್ತಕಗಳನ್ನು ಓದುವುದರಿಂದ ಬಾಲಕರ ಆ ಭಾವನೆಯ ಪರಿವರ್ತನೆಯು ನಿಸ್ಸಂದೇಹವಾಗಿ ಆಗಬಹುದಿದೆ. ಕಾರಣ ಮೇಲಿನ ಇಯತ್ತೆಗಳ ವಿದ್ಯಾರ್ಥೀಗಳು ಈ ಕಾದಂಬರಿಯನ್ನು ಅವಶ್ಯವಾಗಿ ಓದಬೇಕು.

ಕಾದಂಬರಿಕಾರರು ಮೂಲತಃ ಮರಾಟಿಗರು ಕರ್ನಾಟಕದ ನಿವಾಸಿಗಳಾಗಿ ಕನ್ನಡದ ಅಭಿಮಾನವನ್ನು ತಳೆದು ಭಾಷಾಸೇವೆಗೆ ಉದ್ಯುಕ್ತರಾಗಿ ಸಫಲಕಾಮರಾಗಿರುವುದು ಅವರಿಗೆ ಭೂಷಣಾಸ್ಪದ ಸಂಗತಿಯಾಗಿದೆ. ಕನ್ನಡ ಭಾಷೆಯ ಏಳ್ಗೆಯ ವಿಷಯದಲ್ಲಿ ನಿರಾಶೆಯು ನೆಲೆಗೊಂಡಿರುವ ಈ ವಿಷಮ ಸಮಯದಲ್ಲಿ ಮಿ. ಕಾಳೆಯವರು ಹೊಸಹುರುಪಿನಿಂದ ಭಾಷಾಸೇವೆಯನ್ನು ಮಾಡುತ್ತಿರುವುದಕ್ಕಾಗಿ ನಾವು ಅವರನ್ನು ಅಭಿನಂದಿಸದಿರಲಾರೆವು. ಪ್ರಸ್ತುತ ಕಾದಂಬರಿಯ ಭಾಷೆಯು ಕೊಂಚ ಮರಾಠಿಯ ಕಡೆಗೆ ಒಲಿದಿದೆ. ಅನವಶ್ಯಕ ಮರಾಠೀ ಶಬ್ದಗಳ ಪ್ರಯೋಗವೂ ಅಲ್ಲಲ್ಲಿ ಕಂಡುಬರುತ್ತದೆ. ಲೇಖಕರು ಮುಂದಿನ ಆವೃತ್ತಿಯಲ್ಲಿ ಈ ದೋಷವನ್ನು ಸರಿಪಡಿಸಿಕೊಳ್ಳುವರೆಂದು ನಾವು ಆಶಿಸುತ್ತೇವೆ.

ಎಸ್. ಎ. ಕುಲಕರ್ಣಿ, ಭೆಬ್ಬಿ.

---

ಮಿ. ಕಾಳೆ ಇವರು ಬರೆದ 'ವಡಗಾಂವದ ವಿಜಯು'ವೆಂಬ ಐತಿಹಾಸಿಕ ಕಥಾನಕವನ್ನು ಕಡೆತೀರುವಂತೊಮ್ಮೆ ಓದಿ ನೋಡಿದೆನು. ಈಗ ನೂರಾರು ವರ್ಷಗಳ ಹಿಂದೆ ಸ್ವರಾಜ್ಯವಿದ್ದಕಾಲದೊಳಗೆ ಗಂಡಸರಲ್ಲಂತೂ ಇರಲಿ, ಹೆಂಗಸರಲ್ಲಿ ಸಹ ಸ್ವಾಭಿಮಾನ—ಸ್ವದೇಶಾಭಿಮಾನಗಳ ಬಗರು ಎಷ್ಟಿತ್ತು? ಆ ಕಾಲದ ಬ್ರಾಹ್ಮಣರೂಕೂಡ ಎಂತಹ ಶಾಪಾದಪಿ—ಶರಾದಪಿಗಳಾಗಿದ್ದರು? ಪ್ರಜೆಗಳಲ್ಲಿದ್ದ ಸ್ವಾಮಿನಿಷ್ಠೆಯಿನ್ನೆಂತಹದು? ಇವೇ ಮುಂತಾದ ಸಂಗತಿಗಳನ್ನು ಲೇಖಕರು ಬಳ್ಳೇ ಸ್ಫೂರ್ತಿದಾಯಕವಾದ—ಆವೇಶಯುಕ್ತವಾದ ವಾಣಿಯಿಂದ ವರ್ಣಿಸಿರುವರು.

ಬಾಳಾಸಾಹೇಬನ ಹೆಂಡತಿಯಾದ ಜಾಹ್ನವಿಯು ತೋರಿಸಿದ ಅತುಲ ಧೈರ್ಯ ಸ್ವಾಮಿನಿಷ್ಠೆಯು ಪರಾಕಾಷ್ಠತೆಗಳಂತೂ ಇತಿಹಾಸದಲ್ಲಿ ಸ್ವರ್ಣಾಕ್ಷರಗಳಿಂದ ಬರೆದಿಡತಕ್ಕಂಥವಾಗಿವೆ. ಇದೇ ಪ್ರಕಾರ ಮಹಾದಾಜಿ ಸಿಂಧೆ-ಸಖಾರಾಮ ಬಾಪೂ-ಹರಿಪಂತ ಫಡಕೆ-ನಾನಾ ಮೊದಲಾದ ಪ್ರಭೃತಿಗಳು ಸ್ವಾತಂತ್ರ್ಯಕ್ಕಾಗಿ-ಸ್ವರಾಜ್ಯ ಸಂರಕ್ಷಣಕ್ಕಾಗಿ ಎಷ್ಟು ಹೆಣಗಾಡಿದರೆಂಬುವದೂ ಹೊಗಳತಕ್ಕಂತಹದೇ ಸರಿ.

ಇಂಥ ಖಂಬೀರರಿದ್ದರೆಂತಲೇ ಶ್ರೀ ಶಿವಛತ್ರಪತಿಯು ಸ್ಥಾಪಿಸಿದ ಸ್ವರಾಜ್ಯವು ಅತ್ಯಂತ ವಿಷಮವಾದ ಕುಯೋಗದಲ್ಲಿಯೂ ಪಾರುಗಂಡಿತೆಂದು ಹೇಳಬಹುದು.

ಮುಖ್ಯವಾಗಿ—ದೇಶಾಭಿಮಾನಿಗಳಾದ ತರುಣರಿಂದಲೇ ಸ್ವರಾಜ್ಯ ಸಂಪಾದನೆಯೆಂಬ ತತ್ವವನ್ನು, ಐಕಮತ್ಯದಿಂದಲೇ ಸ್ವಾತಂತ್ರ್ಯವೆಂಬ ಸ್ವರ್ಗಸುಖವನ್ನು ಸೂರೆಗೊಳ್ಳದೆಂಬದನ್ನು ಈ ಕಾದಂಬರಿಯಿಂದ ಕಲಿಯಬಹುದಾಗಿದೆ.

ಇನ್ನು—ಭಾಷಾದೃಷ್ಟಿಯಿಂದ ಇದರಲ್ಲಿ ಅಲ್ಪಸ್ವಲ್ಪ ದೋಷಗಳು ಕಂಡುಬಂದರೂ ಕೇವಲ ಮರಾಟಿಗರಾದ ಲೇಖಕರೊಬ್ಬರು ಕರ್ಣಾಟಕ ಭಾಷೆಯ ಮೇಲಿನ ಪ್ರೇಮದಿಂದ ರಚಿಸಿದ ಈ ಕಥಾನಕದಲ್ಲಿ ಅವು ಅಷ್ಟೊಂದು ಗಣನೀಯವಾಗಲಾರವು ಆದರೂ ಎರಡನೆಯ ಆವೃತ್ತಿಯಲ್ಲಿ ಇಂತಹ ದೋಷಗಳನ್ನು ತೆಗೆದು ಹಾಕಿ ಸರ್ವಾಂಗ ಸುಂದರವಾಗುವಂತೆ ಮಾಡಬೇಕೆಂದು ನಾನು ಸೂಚಿಸದಿರಲಾರೆನು.

ಪ್ರಕೃತ ಪರಿಸ್ಥಿತಿಯಲ್ಲಿ ಎಷ್ಟುಓದಿದರೂ ಕಡಿಮೆಯೇ ಆಗಿರುವ ಇಂಥ ವೀರರ ಕಥಾನಕವನ್ನು ಕನ್ನಡಿಗರಿಗೆ ಕಾಣಿಕೆಯಾಗಿಕೊಟ್ಟ ಮಿ. ಭಿ. ಪ. ಕಾಳೆಯವರು ಅಭಿನಂದನೀಯರೇಸರಿ. ಕರ್ಣಾಟಕದ ರಸಿಕವಾಚಕವೃಂದವು ಇವರಿಂದ ಇನ್ನುಮುಂದೆ ಇದಕ್ಕಿಂತಲೂ ಮೇಲಾದ—ಉಜ್ವಲವಾದ ಕಥಾನಕಗಳನ್ನು ಬರೆಯಿಸುವುದಕ್ಕೆ ಪ್ರೋತ್ಸಾಹಿಸದೆ ಇರಲಾರದೆಂದು ನಂಬಿದ್ದೇನೆ. ಇತಿ

ಭೀಮಾಚಾರ್ಯ ಒಡವಿ(ಕಾವ್ಯರತ್ನ)
ಶಾಲಾಗುರು-ಕುಪ್ಪೇಲೂರು